

ಷೇಕ್ ಸಾದಿ

# ಪಾರಸೀ ಕವೀಂದ್ರರು

ಎಂ. ವಾಸುದೇವಮೂರ್ತಿ

## ಫರ್ದೂಸಿ

ಬಸೇ ರಂಜ್ ಬುರ್ದಮ್ ದರೀಂ
ಸಾಲೇ ಸೀ
ಅಜಮ್ ಜಿಂದ ಕರ್ದಮ್
ಬದೀಂ ಪಾರಸೀ

( ಈ ಮೂವತ್ತು ವರುಷ ಅನೇಕ ತೊಂದರೆ ಅನುಭವಿಸಿಬಿಟ್ಟೆ. ಆದರೆ, ಈ ಪಾರಸಿಯಿಂದ ಅಜಮ್ ದೇಶವನ್ನೇ ಜೀವಂತಗೊಳಿಸಿದೆ. )

## ಸಾದಿ

ಬನೀ ಆದಮ್ ಆಜ಼ಾಯೆ ಯಕ್
ದೀಗರ್ ಅಂದ್
ಕೆ ದರ್ ಆಫ಼ರೀನಷ್ ಹಮ
ಅಜ಼್ ಯಕ್ ಔಹರಂದ

( ಆದಮನ ಮಕ್ಕಳು—ಪ್ರಪಂಚದ ಎಲ್ಲ ಜನರು—ಒಬ್ಬರು ಇನ್ನೊಬ್ಬರ ಅಂಗಗಳು ; ಎಲ್ಲರೂ ಒಂದು ಒಡವೆಯಿಂದ ಉಂಟಾದವರು. )

# ಪಾರಸೀ ಕವೀಂದ್ರರು

ಶ್ರೀ. ಡಿ. ವಿ. ಗುಂಡಪ್ಪನವರ ಮುನ್ನುಡಿಯೊಡನೆ



ಬರೆದವರು:

ಶ್ರೀ. ಮಧುಗಿರಿ ವಾಸುದೇವಮೂರ್ತಿ



ಕರ್ನಾಟಕ ಸಂಘ, ಕೊಪ್ಪಳ

ಮುದ್ರಕರು :
ಶ್ರೀ. ವಿ. ಯು. ಜಠಾರ,
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್,
ಧಾರವಾಡ

ಪ್ರಕಾಶಕರು :
ಜನಾರ್ದನರಾವ, ಬಿ.ಎ.,ಬಿ.ಎಲ್., ವಕೀಲ
ಅಧ್ಯಕ್ಷ, ಕರ್ನಾಟಕ ಸಂಘ
ಕೊಪ್ಪಳ

ಮೊದಲ ಮುದ್ರಣ
೧೯೪೨
ಬೆಲೆ : ೧—೦—೦

ಮಾರಾಟಗಾರರು :
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.

# ಮುನ್ನುಡಿ



ಶ್ರೀಮಾನ್ ವಾಸುದೇವ ಮೂರ್ತಿಗಳವರು ಹಾಫೀಸ್ ಕವಿಯ ಪರಿಚಯವನ್ನು ಕನ್ನಡಿಗರಿಗೆ ಉಂಟುಮಾಡಿಕೊಡಬೇಕೆಂದು ಬರೆದ ಪ್ರಬಂಧವನ್ನು ೪-೫ ವರುಷಗಳ ಹಿಂದೆ ನಾನು ಪರಿಷತ್ಪತ್ರಿಕೆಯಲ್ಲಿ ನೋಡಿದೆ. ಪಾರಸೀ ಸಾಹಿತ್ಯದಲ್ಲಿ ಅಗ್ರಗಣ್ಯರಾದ ಇತರ ಕವಿಗಳ ಮೇಲೂ ಅವರು ಅಂಥ ಸಂಕ್ಷೇಪ ವಿಮರ್ಶೆಗಳನ್ನು ಬರೆದು ಪುಸ್ತಕ ರೂಪದಲ್ಲಿ ದೊರಕಿಸಿದರೆ ನಮ್ಮ ಸಾಹಿತ್ಯ ವ್ಯಾಸಂಗಿಗಳಿಗೆ ಅದು ಇಷ್ಟವಾದೀತೆಂದು ಆಗ ನನಗನ್ನಿಸಿತು. ಆ ಯೋಜನೆ ರೂಪುಗೊಂಡಿರುವುದನ್ನು ನೋಡುವ ಸಂತೋಷ ಈಗ ನನ್ನದಾಗಿದೆ.

ನಮ್ಮ ಮನಸ್ಸಂಸ್ಕೃತಿಯ ವಿಕಾಸಕ್ಕೂ ಸಾಹಿತ್ಯಾಭಿವೃದ್ಧಿಗೂ ಇಂಥ ಕೆಲಸ ಉಪಯುಕ್ತವಾದ್ದೆಂದು ನನ್ನ ನಂಬಿಕೆ. ಈ ವಿಚಾರದಲ್ಲಿ ಬೇರೆ ಅಭಿಪ್ರಾಯವೂ ಉಂಟೆಂದು ಕೇಳಿದ್ದೇನೆ. ಅನ್ಯಭಾಷೆಯಿಂದ ತಂದ ಮೊದಲ ದರ್ಜೆಯ ಕೃತಿಗಿಂತ ಸ್ವಭಾಷೆಯಲ್ಲಿ ಮಾಡಿದ ಮೂರನೆ ದರ್ಜೆಯ ಸ್ವತಂತ್ರ ಕೃತಿ ಹೆಚ್ಚು ಬೆಲೆಯುಳ್ಳದ್ದೆಂದು ಒಂದು ವಾದವುಂಟಂತೆ. ಆದರೆ ಆ ತಾರತಮ್ಯ ವಿಚಾರದ ಪ್ರಶ್ನೆ ಸದ್ಯಕ್ಕೆ ನನಗೆ ಅವಶ್ಯವಿಲ್ಲ. ಇಂಥ ಭಾಷಾಂತರ ಸಂಗ್ರಹಗಳಿಗೂ ಸಾಹಿತ್ಯ ಲೋಕದಲ್ಲಿ ಒಂದು ಗಣ್ಯಸ್ಥಾನವಿರುತ್ತದೆಂಬುದಷ್ಟೇ ನನ್ನ ಈಗಣ ಮಾತು.

ಶ್ರೀ. ವಾಸುದೇವಮೂರ್ತಿಗಳವರು ಪಾರಸೀ ಸಾಹಿತ್ಯವನ್ನು ಮೂಲ ಗ್ರಂಥಗಳಲ್ಲಿ ವ್ಯಾಸಂಗ ಮಾಡಿರುವವರು; ಮತ್ತು ಕಾವ್ಯಾಭಿರುಚಿಯನ್ನು ನೈಜಗುಣವಾಗಿ ಪಡೆದುಕೊಂಡಿರುವವರು. ಅವರ ಫಾರಸೀ ಪಾಂಡಿತ್ಯವನ್ನೂ ಕಾವ್ಯ ಸ್ವಾರಸ್ಯ ದೃಷ್ಟಿಯನ್ನೂ ನಾನು ಉಮರ್ ಖಯ್ಯಾಮನ ಕೆಲವು ಪದ್ಯಗಳ ವಿಷಯದಲ್ಲಿ ಅವರ ವಿವರಣೆಗಳನ್ನು ಬೇಡಿ ಪಡೆದುಕೊಂಡಾಗ ಕಂಡುಕೊಂಡೆ. ಅವರು ಇಂಗ್ಲಿಷ್ ಸಾಹಿತ್ಯವನ್ನೂ ಕನ್ನಡ ಸಾಹಿತ್ಯವನ್ನೂ ಅಭ್ಯಾಸಮಾಡಿ ತಮ್ಮ ನಿರೂಪಣ ಶಕ್ತಿಯನ್ನು ಬೆಳಸಿಕೊಂಡಿದ್ದಾರೆ. ಅವರ ವಾಕ್ಸಂಪತ್ತು ಹೀಗಿದ್ದರೂ ಅವರನ್ನು ನೋಡಿದರೆ ಅವರು ಏನಾದರೂ ಮಾಡಿ ಗ್ರಂಥಕರ್ತ ಜಾತಿಗೆ ಸೇರಬೇಕೆಂದು ಪ್ರತಿಜ್ಞೆ ತೊಟ್ಟಿರುವವರ ಹಾಗೆ ನನ್ನ ಕಣ್ಣಿಗೆ ಕಾಣುವುದಿಲ್ಲ. ಅವರದೇನಿದ್ದರೂ ತಾವು ಪಟ್ಟ ಸಂತೋಷಾನುಭವವನ್ನು ತಮ್ಮೊಳಗೇ ನುಂಗಿಕೊಳ್ಳಲಾರದೆ ಮಿತ್ರರಿಗೆ ಹೇಳಿ ದ್ವಿಗುಣ ಮಾಡಿಕೊಳ್ಳುವ ಉತ್ಸಾಹೋಕ್ತಿಯೆಂದು ನಾನು ತಿಳಿದುಕೊಂಡಿದ್ದೇನೆ.

ಜೀವಿತ ತತ್ವದ ಸ್ವರೂಪವನ್ನು ಹುಡುಕುವವರಿಗೆ ಮಹಾಕವಿ ಸಾಕ್ಷ್ಯವೂ ಒಂದು ಪ್ರಮಾಣ. ಅದೇ ಮುಖ್ಯ ಪ್ರಮಾಣವೆನ್ನುವವರೂ ಇದ್ದಾರೆ. ಮನುಷ್ಯಜೀವನದಲ್ಲಿ ಏನು ಸ್ವಾರಸ್ಯ? ಸ್ವಾರಸ್ಯವೇನಾದರೂ ಇದ್ದರೆ, ಅದು ಅವನೊಳಗಿದೆಯೆ? ಹೊರಗಿದೆಯೆ? ಈ ಪ್ರಶ್ನೆಗಳು ಮಾನವಸೃಷ್ಟಿಯ ಜೊತೆಯಲ್ಲಿ ಹುಟ್ಟಿದವು. ಹೃದಯ ಬುದ್ಧಿಗಳೆರಡರಿಂದಲೂ ಮನುಷ್ಯಜೀವ ಉತ್ತರ ಹುಡುಕುತ್ತಿದೆ. ಹೂವೆ? ಹಸಿರೆ? ಪನ್ನೀರೆ? ಹೊಂಬಿಸಿಲೇ? ಜೇನೆ? ಬೆಲ್ಲವೆ? ಸಂಗೀತವೆ? ನರ್ತನವೆ? ರೂಪಕಾಂತಿಗಳೆ? ವೀರಸಾಹಸವೆ? ಪ್ರಣಯವೆ? ಪುತ್ರವಾತ್ಸಲ್ಯವೆ? ಲೋಕೋಪಕಾರವೆ? ಯಶಸ್ಸೆ? ಧರ್ಮವೆ? — ಯಾವುದು ಸುಖ? ಯಾವುದು ಹಿತ? ಒಂದೊಂದರಲ್ಲಿ ಒಂದೊಂದು ರುಚಿ ಇರುವಂತೆ ತೋರುತ್ತದೆ. ಈ ಎಲ್ಲ ರಸರುಚಿಗಳೂ ಒಂದೆಡೆ ಕೂಡಿರುವುದುಂಟೆ? ಇದುವರೆಗೂ ನಾವು ಕಂಡಿರುವುದಕ್ಕಿಂತ ಒಳ್ಳೆಯದಾದದ್ದು ಇನ್ನೂ ಏನೋ ಇರಲಾರದೆ? ಅದೇನು? ಅದೆಲ್ಲಿ? ಈ ತೆರದ ಹುಡುಕಾಟವೇ ಮಾನವ

ತೆಯ ಲಕ್ಷಣ. ಅದೇ ಪ್ರಗತಿಮೂಲ. ಈ ಸಂತತ ತತ್ತ್ವಾನ್ವೇಷಣೆಯಲ್ಲಿ ಪಾರಸೀ ಹೃದಯ ಹೇಗೆ ಮಿಡಿದಿದೆ ಎಂಬುದನ್ನು ಶ್ರೀ. ವಾಸುದೇವಮೂರ್ತಿಗಳ ಲೇಖನದಿಂದ ಅಷ್ಟಿಷ್ಟು ತಿಳಿದುಕೊಳ್ಳಬಹುದು.

ಪುರಾತನ ಪಾರಸಿಕರೂ ಪುರಾತನ ಭಾರತೀಯರೂ ಜ್ಞಾತಿಗಳಂತೆ! ಎಷ್ಟೋ ಅಂತರಂಗ ವಿಚಾರಗಳಲ್ಲಿ ಇಬ್ಬರ ಭಾವಪ್ರವಾಹಗಳೂ ಸಂವಾದಿ ನಾಳಗಳಲ್ಲಿ ಹರಿಯುವಂತೆ ತೋರುತ್ತದೆ. ದೇಶಭೇದ ಕಾಲಭೇದ ಭಾಷಾಭೇದಗಳ ಹಿಂದುಗಡೆ ಕಾಣುತ್ತಿರುವ ಈ ಮಾನವ ಭಾವಸಾದೃಶ್ಯವೇ ನಮ್ಮ ಮನಸ್ಸಿನ ದೃಷ್ಟಿಗೆ ಒಂದು ಸೋಜಿಗದ ಸೊಗಸು. ವಾಙ್ಮಯಗಳು ಬೇರೆ ಬೇರೆ, ಮನಸ್ಸು ಒಂದು. ಜನಾಂಗಗಳು ಬೇರೆ ಬೇರೆ, ಮನುಷ್ಯತ್ವ ಒಂದು.

ಪಂಚ ಭೂತಾತ್ಮಕ ಪ್ರಪಂಚದಲ್ಲಿ ಯಾವುದನ್ನು ನೋಡಿದರೂ ಎದ್ದು ಬಿದ್ದು, ಉರುಳಿ ಹೊರಳಿ, ಸವೆದು ಧೂಳಾಗುತ್ತಿರುವುದೇ ಕಾಣಬರುತ್ತಿದೆ. ಅದರ ಮಧ್ಯದಲ್ಲಿ ತಗ್ಗಿದರೂ ತಣ್ಣಗಾಗದೆ, ಸೋತರೂ ಸಾಯದೆ, ಪದೇ ಪದೇ ಪ್ರಜ್ವಲಿಸುತ್ತಿರುವ ಚೈತನ್ಯ ಮನುಷ್ಯನದು. ಯಾವುದು ಅಳಿದರೂ ಅವನ ಉತ್ತಮತಾ ಚಿಂತನೆ— ಅವನ ಸೌಂದರ್ಯೋಪಾಸನೆ— ಅವನ ಆನಂದಾನ್ವೇಷಣೆ, ದೃಢವಾಗಿ ಉಳಿದುಕೊಂಡಿರುತ್ತದೆ. ಈ ಸತ್ಯ ಪಾರಸೀ ಸಾಹಿತ್ಯದಿಂದಲೂ ಹೊರಪಡುವಂತಿದೆ.

ಶ್ರೀ. ವಾಸುದೇವಮೂರ್ತಿಗಳವರ ಈ ಪುಸ್ತಕದ ವಿಷಯದಲ್ಲಿ ನನಗಿರುವುದು ಒಂದೇ ಕೊರತೆ: ಅದು ಇಷ್ಟು ಸಣ್ಣದೆಂಬುದು. ಅಷ್ಟು ದೊಡ್ಡ ಬಿಂಬಕ್ಕೆ ಇಷ್ಟು ಸಣ್ಣ ಕನ್ನಡಿಯೆ? ಅವರು ಮಾಡಬೇಕಾದದ್ದು ಇಷ್ಟು :— ಫಿರ್ದೂಸಿಯ ಷಾಹನಾಮೆಯಿಂದ ಇಪ್ಪತ್ತು ಮೂವತ್ತು ವೃತ್ತಾಂತಗಳನ್ನಾದರೂ ಆದಷ್ಟು ಸಮಗ್ರವಾಗಿ ಗದ್ಯಕಥಾರೂಪದಲ್ಲಿ—ಒಂದು ಮುನ್ನೂರು ಪುಟದಷ್ಟು—ನಮಗೆ ಕೊಡಬೇಕು. ಹಾಫೀಸನ ಘಸಲುಗಳಲ್ಲಿ ಒಂದು ನೂರನ್ನಾದರೂ ಆರಿಸಿ, ಪೀಠಿಕೆ ಟೀಕೆ

ಗಳೊಡನೆ—ಒಂದಿನ್ನೂರು ಪುಟದಷ್ಟು— ಪದ್ಯರೂಪದಲ್ಲಿ ಕೊಡಬೇಕು. ಅದುವರೆಗೂ ಅವರು ಕೃತಕರ್ತವ್ಯರಾಗಲಾರರು. ತಮ್ಮ ಉಗ್ರಾಣದೊಳಗಿರುವ ಬೂಂದಿ ಬರ್ಫಿಗಳನ್ನು ಅವರು ಇಲ್ಲಿ ನಮ್ಮ ಮುಂದೆ ಹೊಗಳಿ ಚಪ್ಪರಿಸಿ ಲೊಟ್ಟಿಗೆ ಹೊಡೆದಿದ್ದಾರೆ. ಅದರಿಂದ ನಮಗೆ ಬಂದ ಭಾಗ್ಯವೇನು? ಬರಿ ಹೊಟ್ಟೆಯ ತಳಮಳ. ಅಲ್ಲಿರುವ ತಟ್ಟೆಗಳು ತುಂಬಿ ತುಂಬಿ ಇಲ್ಲಿ ಬರಲಿ. ಆಗ ನಾವು ತಿಂದು ತೇಗಿ ತುಂಬಿದೆದೆಯಿಂದ "ಅನ್ನದಾತ, ಸುಖೀ ಭವ" ಎನ್ನುವುದನ್ನು ಅವರು ಕೇಳಿಯಾರು.

ತಾ|| ೯-೧-೧೯೪೭ ಡಿ. ವಿ. ಗುಂಡಪ್ಪ

# ಪ್ರಕಾಶಕರ ಮಾತು

'ಫಾರಸೀ ಕವೀಂದ್ರರು' ನಮ್ಮ ಎರಡನೆಯ ಪ್ರಕಟಣೆ. ಈ ಗ್ರಂಥದ ಮತ್ತು ಗ್ರಂಥಕರ್ತೃಗಳ ವಿಷಯವಾಗಿ, ರಾಜನೀತಿ ಕುಶಲರೂ ಸುಪ್ರಸಿದ್ಧ ಸಾಹಿತಿಗಳೂ ಆದ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಸೊಗಸಾಗಿ ತಿಳಿಸಿದ್ದಾರೆ.

ಈ ಗ್ರಂಥವನ್ನು ಅಚ್ಚು ಹಾಕಿಸಲು ಅನುಮತಿಯಿತ್ತ ಶ್ರೀ. ವಾಸುದೇವ ಮೂರ್ತಿಗಳವರಿಗೂ, ಶುಭಕರವಾದ ಮುನ್ನುಡಿಯ ಕುಂಕುಮ ವಿಟ್ಟ ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೂ ನಾವು ತುಂಬಾ ಕೃತಜ್ಞರಾಗಿದ್ದೇವೆ. ಮತ್ತು ಈ ಗ್ರಂಥಕ್ಕೆ ಷೇಕ್‌ಸಾದಿಯ ಪಡಿಯಚ್ಚನ್ನು ಎರವುಕೊಟ್ಟು ನೆರವಾದ, ಮೈಸೂರು ವಯಸ್ಕರ ಶಿಕ್ಷಣಸಮಿತಿಯ ವ್ಯವಸ್ಥಾಪಕರಾದ ಶ್ರೀ. ಯಸ್. ವಿ. ಶ್ರೀನಿವಾಸರಾಯರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಕರ್ನಾಟಕ ಪ್ರಿಂಟಿಂಗ್ ವರ್ಕ್ಸಿನ ವ್ಯವಸ್ಥಾಪಕರಾದ ಶ್ರೀ. ಜಠಾರರವರಿಗೂ ಮತ್ತು ಪ್ರೂಫ್ ತಿದ್ದುವುದಲ್ಲದೆ ಇತರ ರೀತಿಯಿಂದಲೂ ನಮಗೆ ಸಹಕಾರವಿತ್ತ ಶ್ರೀ. ಮೇವುಂಡಿ ಮಲ್ಲಾರಿಯವರಿಗೂ ನಾವು ಕೃತಜ್ಞರಾಗಿದ್ದೇವೆ.

ಶ್ರೀಮಾನ್ ವಾಸುದೇವಮೂರ್ತಿಗಳವರ ಬರ್ಫಿಗಳನ್ನು ಹೊರಗೆ ತರುವ ಸಾಹಸದಲ್ಲಿ ದೊರೆತ ಕೆಲವು ತುಣುಕುಗಳನ್ನು ಆಯ್ದು ನೀಡಿದ್ದೇವೆ. ಇದನ್ನು ಕನ್ನಡಿಗರು ವಾತ್ಸಲ್ಯದಿಂದ ರುಚಿನೋಡಬೇಕು. ಈ ತುಣುಕುಗಳಿಂದಲೇ ತೃಪ್ತಿಗೊಳ್ಳದಂತೆ ತಟ್ಟೆಗಳಲ್ಲಿ ತುಂಬಿ ನೀಡಲೂ ಮನಸ್ಸಿದೆ. ಯಾವುದಕ್ಕೂ ವಾಚಕರ ಸಹಾನುಭೂತಿ ಅವಶ್ಯ. ಒಪ್ಪೋಲೆಯನ್ನು ಕೊಡಲೇ ಬೇಕಾದುದಕ್ಕೆ ಕ್ಷಮೆ ಬೇಡುತ್ತೇವೆ.

**ಜನಾರ್ದನರಾವ್ ವಕೀಲ**

ಅಧ್ಯಕ್ಷ

ಕರ್ನಾಟಕ ಸಂಘ, ಕೊಪ್ಪಳ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೦ | ೧೨ | ಸಖುದ್ | ಸಖುನ್ |
| ೧೧ | ೬ | ಉದಾಹಠಣಗೆ | ಉದಾಹರಣೆಗೆ |
| ೧೩ | ೧೨ | ನೌಷೇರಪಾನನ | ನೌಷೇರವಾನನ |
| ೧೩ | ೧೩ | ಹೇಳಿದದು | ಹೇಳಿದನು |
| ೧೫ | ೧೪ | ಹೇಳಿದವನು | ಹೇಳಿದನವನು |
| ೧೫ | ೧೭ | ಅದಕೆ ಹೇಳಿದೊಡೆ | ಅದನೆ ಹೇಳಿದೊಡೆ |
| ೨೦ | ೨೧ | ಹೆಸರನ್ನು ಕವಿಗಳ | ಹೆಸರನ್ನು ಯಾವ ಕವಿಗಳ |
| ೨೭ | ೧೮ | ತೋಳನಾದೆಯಾ ಎಂದಿತು | ತೋಳನಾದೆಯು ಎಂದಿತು |
| ೨೯ | ೨೨ | ಇಸ್ಪಹಾನಿ ಜ್ಯಾಜ | ಇಸ್ಪಹಾನ್ ಹಿಜ್ಜಾಜ |
| ೩೦ | ೨೧ | ಹಿಜ್ಯಾಜ | ಹಿಜ್ಜಾಜ |
| ೨೦ | ೨೪ | ಎಮ್ಮೊಂದಿಗಿರುತ್ತಿದ್ದನಾ ಬಿದನು | ಎಮ್ಮೊಂದಿಗಿರುತ್ತಿದ್ದನಾಬಿದನು. ( ಇರುತ್ತಿದ್ದನ್+ಆಬಿದನು ) |
| ೩೧ | ೩ | ಆ ಬಿದನ | ಆಬಿದನ |
| ೩೨ | ೨೬ | ಆ ಸುರನು | ಆಸುರನು |
| ೩೫ | ೧೭ | ಬಾಲ್ಯಕದ | ಬಾಲ್ಬಕದ |
| ೩೬ | ೨೧ | ವೇಳೆಯೋ | ವೇಳೆಯೇ |
| ೪೧ | ೧೫ | ಕುಳಿತುಕೊಳ್ಳುವೆ | ಕುಳಿತುಕೊಳ್ಳುವ |
| ೪೨ | ೬ | ಮೇಲುಂ ಲೋಕದ | ಮೇಲುಲೋಕದ |
| ೭೧ | ೨೪ | ಎಲ್ಲಿ ? | ಎಲ್ಲ ? |



ಉಡುಗೊರೆ

**ಶ್ರೀ ಅಂಬಿಕಾತನಯ ದತ್ತರಿಗೆ**

ಈ ಕಿರಿಯ ಹೊತ್ತಿಗೆ ಕನ್ನಡ ನಾಡಿನ
ಜನಪ್ರಿಯ ಕವಿಗಳೂ, ವಿಮರ್ಶಕರೂ,
ವಾಗ್ಮಿಗಳೂ ಆದ ಶ್ರೀ. ದ. ರಾ. ಬೇಂದ್ರೆ
ಅವರ ೫೧ನೇ ಹುಟ್ಟುಹಬ್ಬದ ದಿನ
ಉಡುಗೊರೆಯಾಗಿ ಸಮರ್ಪಿಸಿದ
ಗೌರವವನ್ನು ಪಡೆದಿದೆ.

## ಮುಂದಿನ ಪ್ರಕಟನೆಗಳು

೧. ರತ್ನಾಕರ ಪ್ರಶಸ್ತಿ
೨. ಹಾಫೀಸನ ಹಾಡುಗಳು
೩. ಇಕ್ಬಾಲರ ಗೀತಗಳು



## ಪರಿವಿಡಿ

# ಪಾರ್ಸಿ ಕವೀಂದ್ರರು

## ಫರ್ದೂಸಿ

ಫರ್ದೂಸಿ ಷಾಹನಾಮ ಗ್ರಂಥವನ್ನು ಬರೆದ ಕವಿ. ಘಜ್ನಿಮಹಮದನ ಕಾಲದವನು. ತೂಸ್ ನಗರದವನು. ಫರ್ದೂಸಿ ವಿಚಾರವಾಗಿ ದೌಲತ್‌ಷಾ ಬರೆದಿರುವ ಪಾರಸೀ ಕವಿಗಳ ಚರಿತ್ರೆಯಲ್ಲಿ ಒಂದು ಸೂಚನೆ ಇದೆ. ಒಬ್ಬ ಶ್ರೀಮಂತನಿಗೆ ತೂಸ್ ನಗರದಲ್ಲಿ ನಾಲ್ಕು ಉದ್ಯಾನವನಗಳಿದ್ದುವಂತೆ. ಅವಕ್ಕೆ ಫರ್ದೂಸ್ ಎಂದು ಕರೆಯುತ್ತಿದ್ದರು. ಫರ್ದೂಸ್ ಎಂದರೆ ಉದ್ಯಾನ, ರಮ್ಯವಾದ ಆರಾಮವೆಂದು ಅರ್ಥ. ನಮ್ಮ ಕವಿಯ ತಂದೆ ಈ ನಾಲ್ಕು ತೋಟಗಳ ಮೇಲ್ವಿಚಾರಕನಾಗಿದ್ದನಂತೆ. ಅದಕ್ಕಾಗಿ ಅವನಿಗೆ ಫರ್ದೂಸಿ ಎಂಬ ಹೆಸರಾಯಿತಂತೆ. ಆತನ ಉದ್ದವಾದ ಹೆಸರು ಹೇಳಬೇಕಾದರೆ 'ಮೌಲಾನಾ ಫಕರುದ್ದೀನ್ ಅಹಮದ್ ಮೌಲಾನಾ ಫಿರಕುಲ್ ಫರ್ದೂಸಿ.' ಮಗ ಪ್ರಸಿದ್ಧನಾದ ಹಕೀಮ್ ಫರ್ದೂಸಿ ನಮ್ಮ ಕವಿ ಹುಟ್ಟಿದ್ದು ತೂಸ್ ನಗರದಲ್ಲಿ. ಕಾಲವಾದದ್ದೂ ಅಲ್ಲಿಯೆ. ಇವನಿಗೆ ಒಬ್ಬ ಮಗಳು ಇದ್ದ ವಿಚಾರ, ಘಜ್ನಿಮಹಮದನು ಫರ್ದೂಸಿಗೆಂದು ದೊಡ್ಡ ಬಹುಮಾನ ಕಳಿಸಿದಾಗ, 'ಇದು ಬರುವ ಹೊತ್ತಿಗೆ ತಂದೆಯೇ ಇಲ್ಲವಾಗಿದ್ದಾನೆ, ಇದನ್ನು ತೆಗೆದುಕೊಂಡು ನಾನೇನು ಮಾಡಲಿ ?' ಎಂದು ಆಕೆ ಹೇಳಿದ ವಿಚಾರ ಕತೆಯಾಗಿ ಬಂದಿದೆ. ಹೀಗೆ ಫರ್ದೂಸಿಯದು ತೂಸ್ ನಗರದ ಒಂದು ಮನೆತನ. ಆ ನಗರದ ಮುಖ್ಯ ಅಧಿಕಾರಿಯಿಂದ ಹಿಂಸೆಯಾದಾಗ ಫರ್ದೂಸಿ ಘಜ್ನಿಗೆ ಹೋದನೆಂದು ಹೇಳುತ್ತಾರೆ. ಅಲ್ಲಿಗೆ ಅವನು ತನ್ನ ಕವಿತ್ವದ ಬಲದ ಮೇಲೆ ಹೋದ.

ಫ಼ರ್ದೂಸಿ ಹುಟ್ಟಿದಾಗ ಅವನ ತಂದೆಗೆ ಒಂದು ಕನಸಾಯಿತು; ಮಗ ಎತ್ತರವಾಗಿದ್ದ ಮನೆಯ ಮೇಲುಮಾಳಿಗೆಯ ತುದಿಗೇರಿ ಒಂದು ಕವಿತೆಯ ಗರ್ಜನೆ ಮಾಡಿದಹಾಗೆ, ನಾಲ್ಕು ಕಡೆಗಳಿಂದಲೂ ಇದಕ್ಕೆ ಮಾರ್ದನಿ ಬಂದಹಾಗೆ. ಇದರ ಅರ್ಥವೇನು ಎಂದು ಆತ ಬಲ್ಲವರನ್ನು ಕೇಳಿದನಂತೆ. ಅವರು 'ನಿನ್ನ ಮಗನ ಕವಿತಾವಾಣಿ ಪ್ರಪಂಚದ ನಾಲ್ಕು ಮೂಲೆಗಳಿಗೂ ಕೇಳಿಸುತ್ತದೆ. ಅದನ್ನು ಜನರೆಲ್ಲರೂ ಒಪ್ಪಿಕೊಳ್ಳುತ್ತಾರೆ' ಎಂದು ಹೇಳಿದರು, ಇದು ಹುಟ್ಟಿದಾಗ. ಕವಿ ಕಾಲವಾಗಿ ಅವನ ಹೆಸರು ಉಳಿದಾಗ: ಷೇಕ್ ಅಬೂ ಅಲ್ ಕಾಸಿಂ ಗುರ್ಗಾನಿ ಎಂಬಾತ ತೂಸ್ ನಗರದ ಸಮೀಪದಲ್ಲಿದ್ದ ಫ಼ರ್ದೂಸಿಯ ಗೋರಿಯನ್ನು ನೋಡುವುದಕ್ಕೆ ಹೋದವನು ಅದರಮೇಲೆ ನಮಾಸ್ ಮಾಡಲಿಲ್ಲವಂತೆ. ಆಗ ಅವನಿಗೆ ಕನಸಿನಲ್ಲಿ ಫ಼ರ್ದೂಸಿ ಕಾಣಿಸಿಕೊಂಡ. ಸ್ವರ್ಗದಲ್ಲಿದ್ದಾನೆ; ದೇವರು ಅವನಿಗೆ ಬಹು ದೊಡ್ಡ ಅಂತಸ್ತು ಕೊಟ್ಟಿದ್ದಾನೆ. 'ಇಂತಹ ದೈವಕೃಪೆ ಹೇಗೆ ಸಂಪಾದಿಸಿದೆ?' ಎಂದು ಗುರ್ಗಾನಿ ಕೇಳಿದ. ಫ಼ರ್ದೂಸಿ ಹೇಳಿದ, 'ನನ್ನ ಕವಿತೆಯ ಆ ಒಂದು ಸಣ್ಣ ಸಾಲಿನಿಂದ!'

**ಪದ್ಯ:** **ಜಹಾಂರಾ ಬಲಂದೀ ಒ ಪಸ್ತೀ ತು ಯೀ**
**ನ ದಾನಮ್ ಚಿ ಯೀ ಹರ್‌ಕೆ ಹಸ್ತೀ ತು ಯೀ.**

(ದೇವ, ಪ್ರಪಂಚವೆಂದರೇ ನೀನು, ಅದು ದೊಡ್ಡದೇ ಆಗಲಿ, ಸಣ್ಣದೇ ಆಗಲಿ ನೀನೇ. ನೀನು ಏನೆಂಬುದನ್ನು ನಾನು ಅರಿಯೆ. ಏನೇನು ಇದೆಯೋ ಅದೆಲ್ಲ ನೀನೆ!)

ಫ಼ರ್ದೂಸಿಯ ಹಿರಿಮೆಯನ್ನು ಅನೇಕ ಕವಿಗಳು ಒಪ್ಪಿಕೊಂಡಿದ್ದಾರೆ. ಪಾರಸಿ ಭಾಷೆಯ ಹಿರಿಯ ಕವಿಗಳ ವಿಷಯದಲ್ಲಿ ಇದೊಂದು ಪ್ರಸಿದ್ಧವಾದ ಪದ್ಯ:

**ದರ್ ಷೇರ್ ಸೆ ತನ್ ಪಯಂಬರಾನಂದ್**
**ಹರ್ ಚಂದ್ ಕೆ ಲಾ ನಬೀ ಬಾದೀ**
**ಔಸಾಫ್ ಒ ಖಸೀದ ಒ ಗಜಲ್ ರಾ**
**ಫ಼ರ್ದೂಸೀ ಒ ಅನ್ವರಿ ಒ ಸಾದಿ.**

(ಪ್ರವಾದಿಗಳು ಇನ್ನು ಬರುವುದಿಲ್ಲ ಎಂದು ಹೇಳಿದ್ದರೂ ಕವಿತ್ವದ ಸೀಮೆಯಲ್ಲಿ ಮೂರು ಮಂದಿ ಪ್ರವಾದಿಗಳು ಬಂದಿದ್ದಾರೆ. ಔಸಾಫ್= ವರ್ಣನೆ, ಇತಿಹಾಸದಲ್ಲಿ ಫರ್ದೂಸಿ, ಖಸೀದ(=ಹೊಗಳಿಕೆ=Panagyric) ದಲ್ಲಿ ಅನ್ವರಿ, ಗಜಲಿನಲ್ಲಿ ಸಾದಿ)

ಈ ಭಾಗದಲ್ಲಿ ದೌಲತ್‌ಷಾ ಸ್ವಲ್ಪ ವಿಮರ್ಶೆಮಾಡಿ ಹೀಗೆ ಹೇಳುತ್ತಾನೆ. ಖಸೀದ ಬರೆಯುವುದರಲ್ಲಿ ಅನ್ವರಿಯಂತೆ ಹಾಹಾನಿ ಕವಿ ಇರುವನೆನ್ನಬಹುದು. ಗಜಲಿನಲ್ಲಿ ಸಾದಿಯೊಂದಿಗೆ ಖಾಜ ಖುಸ್ರುವನ್ನು ಸೇರಿಸಬಹುದು. ಆದರೆ ಅವನ ಬಗೆಯ ಕವಿತಾರಚನೆಯಲ್ಲಿ ಫರ್ದೂಸಿಯೊಂದಿಗೆ ನಿಲ್ಲುವವರು ಯಾರು!

ನಿಜಾಮಿ ಹೇಳುತ್ತಾನೆ:

ಸಖುನ್ ಗೋಯೆ ಪೀಷೀನೆ ದಾನಾಯೆ ತೂಸ್
ಕೆ ಆರಾಸ್ತ್ ರೂಯೇ ಸಖುನ್ ಚೂಂ ಉರೂಸ್

(ತೂಸ್ ನಗರದ ಆ ಹಿಂದಿನ ಹಿರಿಯನ ವಾಕ್‌ಚಾತುರ್ಯವೇ ಚಾತುರ್ಯ; ಆತನು ನುಡಿವೆಣ್ಣಿನ ಮುಖವನ್ನು ತಿದ್ದಿ ಮದುವಣಗಿತ್ತಿಯಂತೆ ಮಾಡಿದ ಅಲಂಕಾರವೇ ಅಲಂಕಾರ.)

ಅನ್ವರಿ ಹೇಳುತ್ತಾನೆ:—

ಅಫರೀಂ ಬರ್ ರವಾನೆ ಫರ್ದೂಸಿ
ಆಂ ಹುಮಾಯೂಂ ನೆಹಾದ ಫರ್‌ಖುಂದ
ಊ ನ ಉಸ್ತಾದ್ ಬೂದ್ ಒ ಮಾ ಷಾಗಿರ್ದ್
ಊ ಖುದಾವಂದ್ ಬೂದ್ ಒ ಮಾ ಬಂದ

(ಫರ್ದೂಸಿಯ ಆತ್ಮಕ್ಕೆ ಒಳ್ಳೆಯದಾಗಲಿ. ಅವನಿಗೆ— ಅವನ ಹೆಸರಿಗೆ—ಯಾವಾಗಲೂ ಶುಭವಿರಲಿ. ಆತ ಕಲಿಸುವವನು, ನಾವು ಕಲಿತುಕೊಳ್ಳುವವರು ಎನ್ನುವ ಹಾಗೆ ಇರಲಿಲ್ಲ. ಆತ ನಮ್ಮ ಒಡೆಯನಾಗಿದ್ದ; ನಾವು ಆತನ ಆಜ್ಞಾಪಾಲಕರಾಗಿದ್ದೆವು.)

ಸಾದಿ ಹೇಳುತ್ತಾನೆ:—

ಚೆ ಖುಷ್ ಗುಫ್ತ್ ಫರ್ದೂಸೀ ಪಾಕ್‌ಜಾದ್
ಕೆ ರಹಮತ್ ಬರಾಂ ತರಬತ್ ಪಾಕ್ ಬಾದ್

(ಶುದ್ಧಾತ್ಮನಾದ ಫರ್ದೂಸಿ ಎಷ್ಟು ಸುಲಲಿತವಾಗಿ ಕವಿತೆ ಹೇಳಿದ. ದೇವರು ಅವನ ಹೆಸರನ್ನು ಪುಣ್ಯಶ್ಲೋಕವಾಗಿ ಉಳಿಸಲೆಂಬುದೆ ನಮ್ಮ ಪ್ರಾರ್ಥನೆ. )

ಹೀಗೆ ಹೆಸರುಗಳಿಸಿದ ಫರ್ದೂಸಿ ಪ್ರಥಮದಲ್ಲಿ ತೂಸ್ ನಗರವನ್ನು ಬಿಟ್ಟು ಘಜ್ನಿಯ ಕಡೆ ಹೊರಟನಷ್ಟೆ. ಘಜ್ನಿಮಹಮುದನ ಆಸ್ಥಾನ ಹಲವು ಕವಿಗಳಿಗೆ ಆಸರೆಯಾಗಿತ್ತು. ಫರ್ದೂಸಿ ಆ ಕವಿಗಳೊಂದಿಗೆ ಬೆರೆತ ಕತೆಗಳಲ್ಲಿ ಒಂದು ಹೀಗಿದೆ. ಆಸ್ಥಾನದ ಕವಿಗಳಲ್ಲಿ ಅನ್ವರಿ, ಅಸ್ಜದಿ, ಫರ್ರುಖಿ ಇವರು ಬಹುಮಟ್ಟಿಗೆ ಮುಖ್ಯರಾಗಿದ್ದರು ಎಂದು ಕಾಣುತ್ತದೆ. ಒಂದು ಉದ್ಯಾನ. ಅಲ್ಲಿ ಈ ಮೂರು ಕವಿಗಳು ಕುಳಿತಿದ್ದಾರೆ. ಉಲ್ಲಾಸದಿಂದ ಮಾತನಾಡುತ್ತಿದ್ದಾರೆ. ಅಲ್ಲಿಗೆ ಫರ್ದೂಸಿ ಬಂದಿದ್ದಾನೆ. ಈ ಹೊಸಬನನ್ನು ಪರೀಕ್ಷೆ ಮಾಡಬೇಕೆನ್ನಿಸಿತು ಆ ಮೂವರಿಗೆ. 'ನಾವು ಮೂವರಿದ್ದೇವೆ, ಪಾರಸಿ ಭಾಷೆಯಲ್ಲಿ ಮೂರು ಮಾತುಗಳ ಮೇಲೆ ನಾಲ್ಕನೆಯದರಲ್ಲಿ ಆ ಪ್ರಾಸ ಬರಬಾರದು, ಅಂತಹ ಪ್ರಾಸ ಹುಡುಕಿ ಮೂರು ಮಂದಿ ಮೂರು ಸಾಲು ಕವಿತೆ ಕಟ್ಟೋಣ. ನಾಲ್ಕನೆಯ ಸಾಲು ಹೇಳು ಎಂದು ಇವನನ್ನು ಕೇಳೋಣ. ಸರಿ, ಸೋಲುತ್ತಾನೆ' ಎಂದುಕೊಂಡರು. 'ರಸಗಳೊಳ್ ಶೃಂಗಾರಮೇ ಬಲ್ಮೆ' ಎಂದಹಾಗೆ ಪ್ರಾರಂಭವಾಯಿತು. ಅನ್ವರಿ ಹೇಳಿದ :

ಚೂಂ ಆರಿಸೇ ತೋ ಮಾಹ' ನ ಬಾಷದ' ರೋಷನ'

(ಪ್ರಿಯಳೆ! ನಿನ್ನ ಮುಖದಂತೆ ಚಂದ್ರನಿಗೆ ಕೂಡ ಕಾಂತಿ ಇಲ್ಲ.)
ಫರ್ರುಖಿ ಹೇಳಿದ:—

ಮಾನಿಂದೆ ರುಖತ್ ಗುಲ್ ನ ಬುವದ' ದರ' ಗುಲ್ಷನ'

( ನಿನ್ನ ಮುಖದಂತೆ ತೋಟದಲ್ಲೆಲ್ಲಾ ಒಂದು ಹೂವು ಇಲ್ಲ. )
ಅಸ್ಜದಿ ಹೇಳಿದ:—

ಮುಷ'ಗಾನತ' ಹಮೀ ಗುಸರ' ಕುನದ' ಅಸ' ಜೋಷನ'

(ನಿನ್ನ ಕಣ್ಣುಗಳು ಅಷ್ಟು ಪ್ರಕಾಶದಿಂದ ಹೊಳೆಯುತ್ತಿವೆ.)
ರೋಷನ್, ಗುಲ್ಷನ್, ಜೋಷನ್ ಮುಗಿದಮೇಲೆ ಪಾರಸಿಯಲ್ಲಿ

ಆ ಪ್ರಾಸ ಮುಗಿದುಹೋಯಿತು ಎಂದುಕೊಂಡರು ಅವರು. ಫಿರ್ದೂಸಿ ಒಂದು ಸಾಲು ಕಟ್ಟಿದ:

**ಮಾನಿಂದೆ ಸನಾನೆ ಗೀವ್ ಪರ್ ಜಂಗೆ ಪೋಷನ್**

(ಪ್ರಿಯಳ ಕಣ್ಣುಗಳು ಹೇಗೆ ಹೊಳೆದುವೆಂದರೆ, ಪೋಷನನೊಂದಿಗಾದ ಯುದ್ಧದಲ್ಲಿ ಗೀವನ ಕತ್ತಿಯು ಹೊಳಪು ಮಿಂಚಿದ ಹಾಗೆ).

ಆಸ್ಥಾನದ ಕವಿಗಳು ಸೋತೆವು ಎಂದರು, ಪೋಷನ್ ಗೀವರ ಕತೆ ಕೇಳಿದರು, ಫಿರ್ದೂಸಿಯನ್ನು ತಮ್ಮೊಂದಿಗೆ ಸೇರಿಸಿಕೊಂಡರು. ಫಿರ್ದೂಸಿ ಘಜ್ನಿಯ ಆಸ್ಥಾನಕ್ಕೆ ಸೇರಿ ದೊರೆ ತನಗೆ ಹೇರಳವಾಗಿ ಹಣ ಕೊಡುವನೆಂದು ಷಾಹನಾಮ ಗ್ರಂಥವನ್ನು ಬರೆದ.

ಕವಿ ಆಸ್ಥಾನಕ್ಕೆ ಸೇರಿದನೆಂದಮೇಲೆ ದೊರೆಯನ್ನು ಎಷ್ಟೋ ಸಂದರ್ಭಗಳಲ್ಲಿ ಹೊಗಳಿಯೇ ಇರಬೇಕು. ಈ ಹೊಗಳಿಕೆಯ ಒಂದು ಸಾಲು ಹೀಗೆ ಇತ್ತೆಂದು ದೌಲತ್‌ಷಾ ತನ್ನ ಕವಿಚರಿತ್ರೆಯಲ್ಲಿ ಎತ್ತಿ ತೋರಿಸಿದ್ದಾನೆ.

**ಚು ಕೂದಕ್ ಲಬ್ ಅಸ್ ಷೀರೆ ಮಾದರ್ ನ ಷುಸ್ತ್**
**ಬ ಗಹ್ವಾರ ಮಹಮೂದ್ ಗೋಯದ್ ನುಹುಸ್ತ್**

(ಎಳೆಗೂಸು, ಅದರ ತುಟಿ ತಾಯಿ ಹಾಲಿನಿಂದ ತೊಳೆಯದ ಮುನ್ನ, ತೂಗು ತೊಟ್ಟಿಲಿನಲ್ಲಿ ಮೊತ್ತ ಮೊದಲಿಗೆ ಮಹಮೂದ್ ಮಹಮೂದ್ ಎನ್ನುವುದಂತೆ. ತಾಯ ಹಾಲಿಗಿಂತ ಸವಿ ಮಹಮೂದನ ಹೆಸರು). ಇದರಿಂದ ಸಂತೋಷಪಟ್ಟೇ ದೊರೆ ಕವಿಗೆ ಬೇಕಾದಷ್ಟು ಆಸರೆ ಕೊಟ್ಟು ಷಾಹನಾಮ ಬರೆಯಲು ಹೇಳಿದನಂತೆ.

ಷಾಹನಾಮ ಮುಗಿಯಿತು. ಘಜ್ನಿಯ ಆಸ್ಥಾನ ಕವಿಯ ಸವಿಗನಸಿಗೆ ತಕ್ಕಂತೆ ಇರದೆ ದೊರೆಕವಿಗಳ ಸಖ್ಯದ ಪ್ರಸಂಗದಲ್ಲಿ ರಾಜಕೀಯ ತಲೆ ಹಾಕಿತು. ಕವಿಯ ಬಯಕೆ ದೊಡ್ಡದಾಯಿತೋ; ಷಾಹನ್ಷಾಹನ ಕೈಯಿ ಕಿರಿದಾಯಿತೋ; ಸಮೀಪದಲ್ಲಿದ್ದವರಿಗೆ 'ಒಂದು ದೊಡ್ಡ ಗ್ರಂಥ' ತಮ್ಮೊಂದಿಗನೊಬ್ಬನು ಬರೆದ ಬರಹ, 'ಏನು ಮಹಾ!' ಎಂದು ಸಾಮಾನ್ಯ ತತ್ಸದಿಂದ ಹಗುರವಾಗಿ ಕಾಣಲವಕಾಶವಾಗಿದ್ದರ

ಬಹುದು ; ವ್ಯವಹಾರಜ್ಞರಿಗೆ ಬರಹ ಭಾರವಾದರೂ ಅದಕ್ಕಾಗಿ ಅರಸನ ಭಂಡಾರ ಹಗುರವಾಗಬಾರದೆಂದು ನ್ಯಾಯ ತೋರಿರಬಹುದು. ಎಲ್ಲಾ ಸೇರಿತು. ಕವಿಗೆ ಅಸಮಾಧಾನವಾಯಿತು. ಈ ಅಸಮಾಧಾನವೂ ಕವಿ ದೊಳೆಯನ್ನು ಹಳಿದು ಬರೆದ ಹುರಿದುಂಬಿದ ಪದ್ಯದಲ್ಲಿ ಹೊರಹೊಮ್ಮಿದೆ.

ಈ ಪ್ರವಾಹವನ್ನು ಕವಿ ಹೀಗೆ ಪ್ರಾರಂಭ ಮಾಡುತ್ತಾನೆ :—

**ಅಯಾ ಷಾಹೆ ಮುಹಮೂದ ಕಿಷ್ವರ್ ಕಷಾಯತ್**
**ಸ ಕಸ' ಗರ್ ನ ತರ್ಸೀ ಬತರ್ಸ್ ಅಸ್ ಖುದಾಯತ್**
**ಕೆ ಪೇಷ್ ಅಸ್ ತೊ ಷಾಹಾಂ ಫರಾವಾಂಬುದಂದ್**
**ಹಮಾ ತಾಜ್ ದಾರಾನೆ ಗೀಹಾಂ ಬುದಂದ್**

(ದೊಡ್ಡ ರಾಜ್ಯದ ಒಡೆಯನಾದ ಮುಹಮೂದನೇ, ಮಾನವರನ್ನು ಕಂಡು ನೀನು ಹೆದರೆಯಾದರೆ ದೇವರಿಗೆ ಹೆದರು. ನಿನಗೆ ಮೊದಲು ಬಹುಮಂದಿ ಅರಸರಿದ್ದರು. ಎಲ್ಲರೂ ವಿಸ್ತಾರ ರಾಜ್ಯದ ಒಡೆಯ ರಾಗಿದ್ದರು.)

'ನಿನಗಿಂತಲೂ ದೊಡ್ಡವರೇ ಆಗಿದ್ದರು. ಅವರಿಗೂ ಕಿರೀಟ, ಸಿಂಹಾಸನ, ಸೈನ್ಯ ಎಲ್ಲಾ ಇದ್ದುವು. ಆದರೆ ಅವರು ನಯ ನಡತೆ ಬಿಟ್ಟು ಹೋಗಲಿಲ್ಲ, ಕೀಳುನಡೆ ನಡೆಯಲಿಲ್ಲ. ಆಶ್ರಯ ಬೇಡಿದವರಿಗೆ ದಾನ ಮಾಡುತ್ತಿದ್ದರು. ಶುದ್ಧ ಹೃದಯಗಳಿಂದ ಭಗವಂತನನ್ನು ಆರಾಧಿಸು ತ್ತಿದ್ದರು. ಒಳ್ಳೇ ಹೆಸರಿಗೆ ದುಡಿದರು. ಘನವಾದ ಫಲಿತಾಂಶ ಹೊಂದಿ ದರು. ಪ್ರಜೆಗಳನ್ನು ನೋಡಿಕೊಂಡು ಕಾಲ ಕಳೆದರು. ಒಡೆತನ ಈಗ ನಿನಗೆ ಬಂದಿದೆ. ನೀನು ಹೀಗೆ ತಿರುಗಿದುದೇಕೆ ಹೇಳು.'

ಹೀಗೆ ಹೇಳುತ್ತ, 'ನನ್ನ ಮಾತಿನ ಹರಿತ ನೀನರಿಯೆ. ನಿನ್ನ ಹಿಂಸೆ ಗಳಿಗೆ ನಾನು ಹೆದರುವುದಿಲ್ಲ. ನಮ್ಮ ನಬಿ (ಆಚಾರ್ಯ) ಮತ್ತು ಅಲಿ ಇವರ ಧರ್ಮದ ಧೈರ್ಯ ನನಗುಂಟು' ಮುಂತಾಗಿ ನುಡಿದು

**ಜಹಾಂ ತಾ ಬುವದ್ ಷಹರ್ ಯಾರಾಂ ಬುವದ್**
**ಪಯಾಮುವ್ ಬರ್ ತಾಜದಾರಾಂ ಬುವದ್**
**ಕೆ ಫರ್ದೂಸಿ ತೂಸೀ ಪಾಕ್ ಜುಫ್ತ್.**
**ನ ಯೀಂ ನಾಮ ಬರ್ ನಾಮೆ ಮುಹಮೂದ ಗುಫ್ .**

ಬ ನಾಮೇ ನಬೀ ಒ ಅಲೀ ಗುಫ್ತ ಅಮ್
ಗಹರ್ಹಾಯೆ ಮಾನೀ ಬಸೇ ಸುಫ್ತ ಅಮ್

"(ಪ್ರಪಂಚವಿರುವವರೆಗೆ ಅರಸುತನ ಇರುತ್ತದೆ, ಮುಂದಿನ ಅರಸುಗಳಿಗೆಲ್ಲಾ ನನ್ನ ಈ ನಿಯೋಗವನ್ನು ನಾನು ಪ್ರಚುರಪಡಿಸಿದ್ದೇನೆ. ಶುದ್ಧ ಹೃದಯವುಳ್ಳ ತೂಸ್ ನಗರದ ಫರ್ದೂಸಿಯಾದ ನಾನು ಈ ಷಾಹನಾಮಾವನ್ನು ದೊರೆಯಾದ ಮಹಮೂದನ ಹೆಸರಿನಲ್ಲಿ ಹೇಳಿಲ್ಲ. ನಮ್ಮ ಆಚಾರ್ಯನಾದ ನಬಿ ಮುಹಮುದನ ಮತ್ತು ಆಲಿಯ ಹೆಸರಿನಲ್ಲಿ ಹೇಳಿದ್ದೇನೆ. ಇದರಲ್ಲಿ ಅನೇಕಾನೇಕ ರಹಸ್ಯವಾದ ತತ್ವಾರ್ಥಗಳನ್ನು ಪೋಣಿಸಿರುತ್ತೇನೆ)" ಎಂದು ಗುಡುಗುತ್ತಾನೆ. ತನ್ನ ಕವಿತೆಗೆ ತಕ್ಕ ಬೆಲೆ ಬರಲಿಲ್ಲವೆನ್ನುತ್ತ

ಚೊ ಉಮುರಮ್ ಬ ನಜ್ದೀಕೆ ಹಷ್ತಾದ್ ಷುದ್
ಉಮೀದಮ್ ಬಯುಕ್ಬಾರ ಬರ್ಬಾದ್ ಷುದ್.

'(ನನ್ನ ವಯಸ್ಸು ಹತ್ತಿರ ಹತ್ತಿರ ೮೦ ಕ್ಕೆ ಬಂದಿತು. ಇದ್ದ ಆಶೆಯೆಲ್ಲಾ ಒಮ್ಮೆಂದೊಮ್ಮೆ ಅಳಿಸಿಹೋಯಿತು)' ಎಂದು ಬಿಸು ಸುಯ್ಯುತ್ತಾನೆ. ಷಾಹನಾಮಾದಲ್ಲಿ ತಾನು ವರ್ಣಿಸಿದ ವೀರರನ್ನು ನೆನೆಸಿಕೊಳ್ಳುತ್ತಾನೆ. 'ತೂರ್, ಸಲೀಮ್, ಅಫ್ರಾಸಿಯಾಬ್, ಫರೀದೂನ್, ಕೈಕುಬಾದ್, ಜಹ್ಹಾಕ್, ಗಷ್ಟಾಸ್ಪ್, ಶಾಮ್, ನರಿಮಾನ್, ಹೋಷಂಗ್, ತಹ್ಮೂರಸ್, ಮಿನೂಚಹರ್, ಜಮ್ಷೀದ್, ಕಾವೂಸ್, ಕೈಖುಸ್ರು, ರುಸ್ತುಮ್, ಗೋದರ್ಜ್, ಲಹರಾಸ್ಪ್, ಗಷ್ತಾಸ್ಪ್, ಜಾಮಾಸ್ಪ್, ದಾರಾ, ಸಿಕಂದರ್, ಬಹಾಮಾನ್, ಅರ್ದಷೀರ್, ಷಾಪೂರ್, ಬಹ್ರಾಮ್, ನೌಷೇರವಾನ್, ಪರವೀಜ್, ಹರಮುಜ್, ಪೋಷನ್, ಕೈಕುಬಾದ್,' ಕೆಟ್ಟವರು, ಒಳ್ಳೆಯವರು.

ಹಮು ಮುರ್ದ ಅಸ್ ರೋಸಗಾರೇ ದರಾಸ್
ಷುದ್ ಅಸ್ ಗುಫ್ತೆ ಮನ್ ನಾಮಷಾಂ ಜಿಂದ ಬಾಸ್
ಚು ಯೀಸಾಮನ್ ಯೀಂ ಮುರ್ದಗಾಂ ರಾತಮಾಷರ್
ಸರಾಸರ್ ಹಮು ಜಿಂದ ಕರ್ದಮ್ ಬನಾಮ್.

'(ಎಷ್ಟೋ ದಿವಸಗಳಿಂದ ಇವರೆಲ್ಲ ಸತ್ತಿದ್ದರು. ನನ್ನ ನುಡಿಯಿಂದ ಅವರ ಹೆಸರುಗಳಿಗೆ ಜೀವ ಬಂದಿತು. ಏಸುವಿನಂತೆ ಹೆಸರಿನಿಂದ ಅವರನ್ನು ಒಮ್ಮೆಂದೊಮ್ಮೆ ಜೀವಂತರನ್ನಾಗಿ ಮಾಡಿದ್ದೇನೆ.)'

ತನ್ನ ನುಡಿಯ ಕೆಚ್ಚನ್ನು ಹೀಗೆ ಹೇಳಿಕೊಳ್ಳುತ್ತಾನೆ. ಹಾಗೆಯೇ ತನ್ನ ಸೇವೆಯಿಂದ ಘಜನೀಮುಹಮೂದನನ್ನೂ ಲೋಕ ನೆನೆಯು-ವಂತಾಯಿತಲ್ಲಾ ಎನ್ನುತ್ತಾನೆ. ತನ್ನ ಕವಿತೆಯ ಕಟ್ಟಡ:

**ಬನಾಹಾಯೆ ಅಬಾದ್ ಗರ್ದದ್ ಖರಾಬ್**
**ಸ ಬಾರಾಂ ಒ ತಾಬಿಷೇ ಅಫ್ತಾಬ್.**
**ಫೈಉಫ್ಗಂದಮ್ ಅಸ್ ನಜಮ್ ಕಾಹೇ ಬಲಂದ್**
**ಕೆ ಅಸ್ ಬಾದ್ ಒ ಬಾರಾಂ ನ ಯಾಬದ್ ಗಜಂದ್**

(ಕಲ್ಲು ಇಟ್ಟಿಗೆಗಳ ಕಟ್ಟಡಗಳು ಮಳೆ ಬಿಸಿಲಿಗೆ ಉರುಳುವವು, ಕಾವ್ಯದ ಈ ಕಟ್ಟಡ ಗಾಳಿಗೆ ಉರುಳದು, ಮಳೆಗೆ ಕರಗದು.)

ತಾನು ಷಾಹನಾಮಾಕ್ಕೆ ಕಷ್ಟಪಟ್ಟುದನ್ನು ಹೇಳುತ್ತಾನೆ:

**ಬಸೇ ರಂಜ್ ಬುರ್ದಮ್ ದರೀಂ ಸಾಲೆ ಸೀ**

(ಈ ಮೂವತ್ತು ವರುಷಕಾಲ ನಾನು ಅನೇಕ ತೊಂದರೆಗಳನ್ನು ಸಹಿಸಿದ್ದೇನೆ)

ಫಲಿತಾಂಶ ದೊಡ್ಡದು.

**ಅಜಮ್ ಜಿಂದ ಕರ್ದಮ್ ಬದೀಂ ಪಾರಸಿ.**

(ಈ ಪಾರಸಿ ಲಿಖಿತದಿಂದ ಅಜಮ್-ಈರಾನ್-ದೇಶವನ್ನೇ ಜೀವಂತಗೊಳಿಸಿದ್ದೇನೆ.)

ಇದಕ್ಕೆ ದೊರೆ ಸರಿಯಾದ ಮನ್ನಣೆ ಕೊಡಲಿಲ್ಲವಲ್ಲಾ ಎಂದು ಸಿಟ್ಟಿನ ದನಿ ಎತ್ತುತ್ತಾನೆ:

**ಕೆ ಸಿಫ್ಲಾ ಖುದಾವಂದೆ ಹಸ್ತೀ ಮಬಾದ್.**
**ಜಹಾನ್‌ಮರ್ದರಾ ತಂಗದಸ್ತೀ ಮಬಾದ್.**

(ಜಿಪುಣ ಜನಪದದ ಒಡೆಯನಾಗಿರಬಾರದು, ಧಾರಾಳಿಯಾದವ-ನಿಗೆ ಬಡತನ ಇರಬಾರದು!)

ದೊರೆಯನ್ನು ಇನ್ನೂ ಹಳಿಯದೆ ಕವಿ ನಿಲ್ಲಲಾರ.

ಅಗರ್ ಷಾಹರಾ ಷಾಹ ಬೂದೇ ಪಿದರ್
ಬಸರ್ ಬರ್ ನೆಹಾದೇ ಮರಾ ತಾಜಿ ಸರ್

( ಈ ದೊರೆಯ ತಂದೆ ಒಬ್ಬ ದೊರೆಯಾಗಿದ್ದರೆ— ಈ ದೊರೆ ದೊರೆಯ ಮಗನಾಗಿದ್ದರೆ—ಈತ ನನಗೆ ಒಂದು ಕಿರೀಟವನ್ನೇ ತೊಡಿಸಬಹುದಾಗಿತ್ತು ).

ಒ ಗರ್ ಮಾದರೇ ಷಾಹ ಬಾನೂ ಬುದೇ
ಮರಾ ಸೀಮ್ ಒ ಸರ್ ತಾ ಬ ಸಾನೂ ಬುದೇ

( ಷಾಹನ ತಾಯಿ ಅರಸುಗುವರಿಯಾಗಿದ್ದರೆ— ಬಾನೂ—, ಆಗ ಈ ಷಾಹ ಮೊಣಕಾಲಿನವರೆಗೆ— ಸಾನೂ-ನನ್ನನ್ನು ಹೊನ್ನಿನ ರಾಸಿಯಲ್ಲಿ ನಿಲ್ಲಿಸಬಹುದಿತ್ತು ).

‘ ಎರಡೂ ಇಲ್ಲ ! ದೊರೆ ಏನೋ ಕೊಡುವನೆಂದು ಮೂವತ್ತು ವರುಷ ಷಾಹನಾಮಂ ಬರೆದದ್ದಾಯಿತು. ನನ್ನ ದಾರಿ ನಾನು ಹಿಡಿದದ್ದಾಯಿತು. ಹಿರಿಯರ ಕತೆ ಗ್ರಹಿಸುವುದಕ್ಕೂ ಹಿರಿಯತನ ಬೇಕು. ’

ದರಖ್ತೇ ಕೆ ತಲ್ಖ್ ಅಸ್ತ್ ವೇರಾ ಸರಿಷ್ತ್
ಗರಷ್ ದರ್ ನಿಷಾನೀ ಬ ಬಾಗೇ ಬಿಹಿಷ್ತ್
ವರ್ ಅಸ್ ಜೋಯೇ ಖುಲ್ದಷ್ ಬ ಹಂಗಾಮೆ ಆಬ್
ಬ ಯಖ್ ಅಂಗಬೀನ್ ರೀಸೀ ಒ ಷಹದೆ ನಾಬ್
ಸರ್ ಅಂಜಾಮೆ ಗೌಹರ್ ಬ ಕಾರ್ ಆವುರದ್
ಹುಮಾ ಮೇವಯೇ ತಲ್ಖ್ ಬಾರ್ ಆವುರದ್

( ಒಂದು ಮರಕ್ಕೆ ಹುಟ್ಟಿನಲ್ಲಿ ಕಹಿ ಇದೆ. ಅದನ್ನು ಸ್ವರ್ಗದ ತೋಟದಲ್ಲಿ ಇಡಬಹುದು, ಜೇನುತುಪ್ಪ ಹೊಯ್ದು ಸಾಕಬಹುದು. ಫಲ ಬಿಟ್ಟಮೇಲೆ ನೋಡಿದರೆ ಅದೇ ಕಹಿಯೆ ).

ಬ ಅಂಬರ್ ಫರೋಷಾಂ ಅಗರ್ ಬಗುಸರೀ
ಷವದ್ ಜಾಮಯೇ ತೋ ಹಮ ಅಂಬರೀ
ಒ ಗರ್ ತೂ ಷವೀ ನಸ್ದೆ ಅಂಗಷ್ತ್ ಗರ್
ಅಸ್ ಊ ಜುಸ್ ಸಿಯಾಹೀ ನಯಾಬೀ ದಿಗರ್

(ಪರಿಮಳ ಮಾರುವವರ ಹತ್ತಿರ ನೀವು ಓಡಾಡಿದರೆ ನಿಮ್ಮ ಉಡುಪಿಗೆಲ್ಲಾ ಪರಿಮಳ ಬರಬಹುದು. ಇದ್ದಿಲು ಮಾಡುವವನ ಹತ್ತಿರ ಹೋದರೆ ಅರಿವೆ ಕಪ್ಪಾಗದೆ ಇನ್ನೇನು ಫಲವಾದೀತು?)

ಸ ನಾಕಾಶ್ ಜಾದಾ ಮದಾರೇದ್ ಉಮೀದ್
ಕೆ ಜಂಗೀ ಬ ಷುಸ್ತನ್ ನ ಗರ್ದದ್ ಸಫೀದ್

(ಕೊಳಕು ಕುಲದವರಲ್ಲಿ ಏನು ಆಶೆಯನ್ನೂ ಇಟ್ಟುಕೊಳ್ಳಬೇಡಿ. ಜಂಗೀ ಮನುಷ್ಯ, ಜಾತಿಯಿಂದ ಕಪ್ಪು. ತೊಳೆದರೆ ಎಂದಿಗೂ ಬೆಳ್ಳಗಾಗ).

ಇಷ್ಟೆಲ್ಲಾ ತೋಡಿಕೊಂಡದ್ದು ಏಕೆಂದರೆ ಕವಿಯೇ ಕಡೆಯಲ್ಲಿ ಹೇಳುತ್ತಾನೆ:

ಅಸ್ ಅಂ ಗುಫ್ತಮ್ ಈ ಬಯತ್‌ಹಾಯೇ ಬಲಂದ್
ಕೆ ಷಾಹ ಗೀರದ್ ಅಸ್ ಈಂ ಕಾರ ಪಂದ್
ಕೆ ಅಕೀಂ ಪಸ್ ಬದಾನದ್ ಚಿ ಬಾಷದ್ ಸಖುನ್
ಬ ಅಂದೀಷದ್ ಅಸ್ ಪಂದೆ ಪೀರೇ ಕಹುನ್
ದಿಗರ್ ಷಾಯರಾಂ ರಾ ನ ಯಾಜಾರದ್ ಊ
ಹುಮಾ ಹರ್‌ಮತೇ ಖುದ್ ನಿಗಹ್ ದಾರದ್ ಊ.

(ಇಷ್ಟು ಉದ್ದವಾದ ಪದ್ಯ ಹೇಳಿದ್ದು ಏಕೆಂದರೆ, ಇದರಿಂದ ದೊರೆ ನೀತಿ ಕಲಿಯಲಿ ಎಂದು, ಇನ್ನು ಮುಂದಕ್ಕೆ ಮಾತಿನ ಬಲ ಎಷ್ಟಿದೆ ಅರಿಯಲೆಂದು, ಈ ಮುದುಕನ ಬುದ್ಧಿವಾದವನ್ನು ಚೆನ್ನಾಗಿ ಆಲೋಚಿಸಿ ನೋಡಲೆಂದು, ಇತರ ಕವಿಗಳನ್ನು ಹೀಗೆ ಹಿಂಸಿಸದಿರಲೆಂದು).

ಕವಿಯ ಮಾತಿನ ಶಿಖೆ ದೊರೆಗೆ ಮುಟ್ಟಿರಬೇಕು. ಆತನು ಕವಿಗೆ ತಕ್ಕಷ್ಟು ಸಮಾಧಾನವಾಗುವ ಮಟ್ಟಿಗೆ ಬಹುಮಾನವನ್ನು ತೂಸ್ ನಗರಕ್ಕೆ ಕಳಿಸಿದನೆಂದು ಪ್ರತೀತಿಯುಂಟು. ಅದು ಫರ್ದೂಸಿಗೆ ಮುಟ್ಟಲಿಲ್ಲ. ಅವನ ಮಗಳಿಗೆ ಮುಟ್ಟಿತು.

ಷಾಹನಾಮದ ಕತೆ ಈರಾನಿನ ಹಿಂದಿನ ಅರಸುಗಳ ಕತೆ. ನಾಗರೀಕತೆ ಮೊತ್ತಮೊದಲು ಹುಟ್ಟಿದಂದಿನಿಂದ ಪ್ರಾರಂಭವಾಗಿ,

ಪೌರಾಣಿಕವಾಗಿಯೂ, ಐತಿಹಾಸಿಕವಾಗಿಯೂ ಹರಿದು, ಮಹಮದೀಯ ಯುಗ ಈರಾನಿನಲ್ಲಿ ಪ್ರಾರಂಭವಾಗುವುದಕ್ಕೆ ಸ್ವಲ್ಪ ಮುಂಚಿನ ವರೆಗೆ ಬರುತ್ತದೆ. ಆದಿಯಲ್ಲಿ ಯಾವ ಮತವೆಂತ್ಲೋ ಗೊತ್ತಾಗುವುದಿಲ್ಲ. ಜಮ್ಷೇದನ ಕತೆಯಲ್ಲಿ ಸ್ವಲ್ಪ ಹಿಂದೂಸಂಪ್ರದಾಯ ಕಾಣುತ್ತದೆ. ಕತೆ ಮುಂದುವರಿಯುತ್ತಾ ಬೇರೆ ಬೇರೆ ಸಂಪ್ರದಾಯದ ಜನಗಳಲ್ಲಿ ಬಾಂಧವ್ಯ ಬೆಳೆಯುವ ಪ್ರಸಂಗಗಳು ಬರುತ್ತವೆ. ಉದಾಹರಣೆಗೆ ಜಾಲನು ಈರಾನಿ. ರುದಾಬಳು ಕಾಬೂಲಿನವಳು. ಕತೆಯಲ್ಲಿ ಜಹ್ಹಾಕನ— ಎಂದರೆ ಅರಬ್ಬಿ—ಸಂತತಿಯೆಂದು ಹೇಳಿದೆ. ಇದಕ್ಕೆ ಮುಖ್ಯಕಾರಣ ಪ್ರತಿಮೆಗಳ ಪೂಜೆಯು ಸಾಮ್ಯ ಎಂದಿಟ್ಟುಕೊಂಡರೆ, ಇದು ಹೆಚ್ಚು ಸಮಂಜಸವಾಗಿ ಹಿಂದೂಸಂಪ್ರದಾಯಕ್ಕೆ ಒಪ್ಪುತ್ತದೆ. ಕಾಬುಲ್ ಎಂದರೆ ಹಿಂದೂದೇಶದ ಒಂದು ಭಾಗವೇ ಎಂದು ಹೇಳಬಹುದು. ಎಷ್ಟೋ ವಾದವಿವಾದಗಳಾಗಿ ಜಾಲ್ ರುದಾಬರ ಮದುವೆಯಾಗುತ್ತದೆ. ಅವರ ಮಗ ರುಸ್ತಮ್. ಷಾಹನಾಮದ ಕತೆ ಇನ್ನೂ ಮುಂದುವರಿದ ಹಾಗೆ ಅರಸರು, ಪ್ರಜೆಗಳು ಜರತುಸ್ತ್ರನ ಅನುಯಾಯಿಗಳು ಅಥವಾ ಅಗ್ನಿಪೂಜಕ ಮತಸ್ಥರಾಗಿರುವುದು ಗೋಚರವಾಗುತ್ತದೆ. ಬರೆದ ಕವಿ ಷಿಯ್ಯಾ. ಬರೆಸಿದ ಅರಸು ಸುನ್ನಿ. ಇದನ್ನೆಲ್ಲಾ ನೋಡಿದರೆ ಷಾಹನಾಮದ ಕತೆಗೆ ಮತ ಪ್ರಧಾನವಲ್ಲ, ದೇಶ ಪ್ರಧಾನ. ಇದು ಫರ್ದೂಸಿ ಮಹಾಕವಿ ನಮಗೆ ಹಾಕಿಕೊಟ್ಟಿರುವ ಹೆದ್ದಾರಿ. ಅವನು ಘಜ್ನಿ ಮಹಮದನನ್ನು ಬಯ್ಯುವುದಕ್ಕೆ ಹೋಗಿ, ತನ್ನ ನೋವು ಹೇಳುವುದಕ್ಕೆ ಹೋಗಿ ತನ್ನ ದೇಶ, ತನ್ನ ಭಾಷೆಯನ್ನು ಉದಾಹರಣೆಯಾಗಿಟ್ಟುಕೊಂಡು ಈ ಒಂದು ವಿಶ್ವ ಸತ್ಯವನ್ನು ನುಡಿದು ಹೋಗಿದ್ದಾನೆ:

ಬಸೀ ರಂಜ್ ಬುರ್ದಮ್ ದರೀಂ ಸಾಲೇ ಸೀ

( ಈ ಮೂವತ್ತು ವರ್ಷ ಅನೇಕ ತೊಂದರೆ ಅನುಭವಿಸಿಬಿಟ್ಟೆ. )

ಅಜಮ್ ಜಿಂದ ಕರ್ದಮ್ ಬದೀಂ ಪಾರಸಿ

( ಈ ಪಾರಸಿಯಿಂದ ಅಜಮ್ ದೇಶವನ್ನೇ ಜೀವಂತಗೊಳಿಸಿದೆ ).

# ಸಾದಿ ಮತ್ತು ಅವನ ಕಾವ್ಯ

ಕವಿಗಳೆಂದರೆ ಅವರವರ ದೇಶಗಳ ಸಹಜ ಪ್ರತಿನಿಧಿಗಳು. ಈ ಭಾವನೆಗನುಸಾರವಾಗಿ ಸಾದಿಯ ಹೆಸರನ್ನೆತ್ತಿದ ಕೂಡಲೆ, ಪರ್ಷಿಯ ದೇಶದವನಲ್ಲವೇ ಎಂದು ಕೇಳುವುದೂ ಪರ್ಷಿಯವೆಂದಕೂಡಲೆ, ನಮಗೆ ಸಾದಿಯನ್ನು ಕೊಟ್ಟ ದೇಶ ಅದು ಎಂದು ಹೇಳುವುದೂ ಸ್ವಭಾವ. ಪರ್ಷಿಯನ್ನರಿಗೆ ಸಾದಿ, ಷೇಕ್ ಸಾದಿ. ಶ್ರೀಮಂತ, ಪೂಜ್ಯ, ಗುರು. ಅವನ ಮಾತು ನಾಣ್ಣುಡಿ. ಅವನ ಮಾತುಕತೆಗಳ ಸಂಗ್ರಹ ಹಣತೆ ಹೊತ್ತಿಸುವ ಪ್ರತಿಮನೆಯಲ್ಲಿ ಇರಬೇಕಾದದ್ದು. ಪರ್ಷಿಯಾ ದೇಶ ನಮಗೆ ಕೆಲವು ಶತಮಾನಗಳಿಂದ ಪರಿಚಯವಾದ ನೆರಮನೆ. ಸುಮಾರು ಕ್ರಿಸ್ತಶಕ ೬–೭ ನೇ ಶತಮಾನದಷ್ಟು ಹಿಂದೆಯೇ ಪರ್ಷಿಯಾದ ದೊರೆ ಖುಸ್ರು ಪುಲಿಕೇಶಿಯ ಆಸ್ಥಾನಕ್ಕೆ ರಾಯಭಾರಿಗಳನ್ನು ಕಳಿಸಿದ್ದ ನೆಂತಲೂ, ಇಲ್ಲಿಂದ ಕನ್ನಡ ರಾಯಭಾರಿಗಳು ಪರ್ಷಿಯ ಆಸ್ಥಾನಕ್ಕೆ ಹೋಗಿದ್ದರೆಂತಲೂ ಹೇಳುತ್ತಾರೆ.

ಸಾದಿಯ ಕಾಲ (ಸುಮಾರು ಕ್ರಿ. ಶ. ೧೧೮೪ ರಿಂದ ೧೨೯೨ ರ ವರೆಗೆ) ನಮ್ಮ ಕನ್ನಡನಾಡಿನಲ್ಲಿ ಹೊಯ್ಸಳರ ಪ್ರಾಬಲ್ಯವಿದ್ದ ಕಾಲಕ್ಕೆ ಸರಿಹೊಂದುತ್ತದೆ. ಮಹಮದೀಯರು ದಖನ್ನಿಗೆ ಇನ್ನೂ ದಂಡೆತ್ತಿ ಬಂದಿರಲಿಲ್ಲ. ಅವರು ಇಲ್ಲಿಗೆ ಬಂದು ಕೆಲವು ರಾಜ್ಯಗಳನ್ನು ಕಟ್ಟಿದ್ದು ಮುಂದಿನ ಶತಮಾನದಲ್ಲಿ. ಆಗ ಪರ್ಷಿಯದ ಕವಿಪರಂಪರೆಯಲ್ಲಿ ಸಾದಿಯ ಸ್ಥಾನ ಹಾಫಿಸ್‌ನಿಗೆ ಬಂದಿತ್ತು. ಬಹಮನಿ ರಾಜ್ಯದ ದೊರೆಯಾಗಿದ್ದ ಮಹಮುದ್ ಷಾಹನು ತನ್ನ ಆಸ್ಥಾನಕ್ಕೆ ಬರಬೇಕೆಂದು ಹಾಫಿಸನಿಗೆ ಹೇಳಿಕಳುಹಿಸಿದ್ದನೆಂದು ತಿಳಿಯಬಂದಿದೆ. ಇದರಿಂದ ಸಾದಿಯ ಕಾಲ ಎಷ್ಟು ಹಿಂದಿನದು ಎಂಬುದು ಸ್ವಲ್ಪ ಮಂದಟ್ಟಾಗುತ್ತದೆ.

ಉತ್ತರ ಹಿಂದುಸ್ಥಾನದಲ್ಲಿ ಆಗ ಪಠಾನರ ಆಳಿಕೆ. ಸಾದಿ ಅಗ್ಲಮುಷ್ ದೊರೆಯ ಬಾಗಲಲಿ ಕಂಡೆ ನಾನೊಬ್ಬ ಅಧಿಕಾರಿಯ

ಮಗನ' ಎಂದು ಒಂದು ಕತೆ ಹೇಳಿದ್ದಾನೆ. ಇಲ್ಲಿ ಅಗ್ಲಮುಷ್ ಎಂದು ಕರೆದಿರುವ ದೊರೆಯೇ ದಿಹಲಿಯ ಸುಲ್ತಾನ್ ಅಲ್ತಮುಷ್ ಪಠಾನನೆಂದು ಕಾಣುತ್ತದೆ.

ಸಾದಿಯ ಬರಹದಲ್ಲಿ ಅಲ್ಲಲ್ಲಿ ಹಿಂದೂಸ್ಥಾನದ ವಿಷಯವಾಗಿ ಬರುವ ಸೂಚನೆಗಳಿಂದ ಎಂತಹ ಚಿತ್ರ ನಮ್ಮ ಮನಸ್ಸಿನೆದುರಿಗೆ ಕಾಣುತ್ತದೆ ಎಂಬುದನ್ನು ಲಕ್ಷಿಸಬಹುದು. ಗುಲಿಸ್ಥಾನ್ ಪುಸ್ತಕದ ಪೀಠಿಕೆಯಲ್ಲಿ 'ಹಿಂದೂದೇಶದ ಬುದ್ಧಿವಂತರು ಬುಜರ್ ಚಮುಹರನ ಗುಣದೋಷಗಳ ವಿಮರ್ಶೆಯನು ಮಾಡುತ್ತ ಒಂದು ದೋಷವನು ಹೇಳಿದರು' ಎಂಬ ಮಾತು ಬರುತ್ತದೆ. ಇದು ಹಿಂದೂಸ್ಥಾನಕ್ಕೂ ಪರ್ಷಿಯಾಕ್ಕೂ ಇದ್ದ ವಿದ್ವಾಂಸರ ಮಾತುಕತೆಗಳ ವಿನಿಮಯದ ಕುರುಹು; ಬುಜರ್ ಚಮುಹರನು ಪರ್ಷಿಯದ ದೊರೆಯಾಗಿದ್ದ ನೌಷೇರವಾನನ ಮಂತ್ರಿ 'ಬಾಣ ಬಿರುಸುಗಳನ್ನು ಹೊತ್ತಿಸುವ ಆಟವನು ಕಲಿಸುತಿದ್ದನು ಒಬ್ಬ ಹಿಂದೂದೇಶದ ಆತ. ಹೇಳಿದದು ಅವನೊಬ್ಬ ತತ್ವಜ್ಞನಾತನಿಗೆ, ಎಲೆ ಅಣ್ಣ, ನಿನಗಲ್ಲ ಈ ಆಟ, ಹುಲ್ಲು ಹೊಚ್ಚಿದೆ ನೋಡು ನೀನಿರುವ ಆ ಮನೆಗೆ.' ಈ ಕತೆಯಲ್ಲಿ ಒಂದು ಸಾಮಾನ್ಯ ಜೀವನದ ಚಿತ್ರವಿದೆ. ಇನ್ನೊಂದು ಕತೆಯಲ್ಲಿ ಒಬ್ಬ ವ್ಯಾಪಾರಿ 'ಪರ್ಷಿಯದ ಗಂಧಕವ ಚೀಣದೇಶಕೆ ಒಯ್ವೆ, ಅದಕಲ್ಲಿ ಬಹಳ ಧಾರಣೆಯೆಂದು ಹೇಳುವರು. ಚೀಣಾದ ಹೊಳೆವ ಮಣ್ಣಿನ ಪಾತ್ರೆಗಳನೊಯ್ವೆ ರೋಮ ದೇಶದ ಕಡೆಗೆ, ರೋಮದಾ ಕಿನ್‌ಕಾಬ ಹಿಂದೂದೇಶಕೆ ತರುವೆ, ಹಿಂದುಸ್ಥಾನದ ಉಕ್ಕು ಹಲಬ ಪಟ್ಟಣಕೊಯ್ವೆ; ಹಲಬದಾ ಗಾಜುಗಳ ಯಾಮೆನಿಗೊಯ್ಯುವೆನು, ಯಾಮೆನ ಪಟ್ಟೆಗಳ ಕೊಂಡು ಬರುವೆನು ಮತ್ತೆ ಪರ್ಷಿಯಕೆ' ಎಂದು ಹೇಳುತ್ತಾನೆ.

ಬಂಗಾರ ಪಾದದೊಳಗೆರೆಯಲಾದರು ಬಹುದು,
ಹಿಂದೀಯ ಕತ್ತಿಯನು ಸೆಳೆದು ಝಳಪಿಸಬಹುದು,
ಆಶೆಭೀತಿಗಳಿಲ್ಲ ಒಮ್ಮನದ ಸಾಧಕಗೆ
ದೇವನಾ ಕಟ್ಟಿನಲಿ ನಂಬಿಕೆಯನಿರಿಸಿಹನು.

ಎಂಬಲ್ಲಿ ಹಿಂದೀಯ ಶಕ್ತಿ ಎಷ್ಟು ಬಳಕೆಯ ಮಾತಾಗಿ ಬಂದಿದೆ ನೋಡಬಹುದು.

ಇನ್ನು ಸಾದಿಯ ದೇಶವಾದ ಪರ್ಷಿಯಾ ದೇಶವನ್ನು ನೋಡೋಣ. ಈ ಕಾಲಕ್ಕಾಗಲೇ ಆ ದೇಶದಲ್ಲಿ ಮುಹಮುದೀಯ ಮತ ವ್ಯಾಪಿಸಿ ಕೆಲವು ಶತಮಾನಗಳಾಗಿತ್ತು. ಪಾರಸಿ, ಅರಬ್ಬಿಗಳ ಸಂಮಿಶ್ರಣದಿಂದಾದ ಒಂದು ಸಂಸ್ಕೃತಿ ಬೆಳೆದಿದ್ದಿತೆನ್ನಬಹುದು. ಇದಕ್ಕೆ ತಕ್ಕ ವಿದ್ಯಾ-ಸಂಸ್ಥೆಗಳು ಅಲ್ಲಲ್ಲಿ ತಲೆಯೆತ್ತಿದ್ದವು. ಮುಕ್ಕಾಯಾತ್ರೆಯ ವಿಷಯಗಳು, ಪ್ರಾರ್ಥನಾಲಯಗಳ ಮಾತುಗಳು ಸಾದಿಯ ಕತೆಗಳಲ್ಲಿ ಹೇರಳ-ವಾಗಿ ಬರುತ್ತವೆ.

ಅರಬ್ಬಿ ಪಾರ್ಸಿಗಳ ವ್ಯಾಪ್ತಿಯ ಕೆಲವು ಸೂಚನೆಗಳು ಹಲವು ಕತೆಗಳಲ್ಲಿ ಕಾಣಬರುತ್ತವೆ. ಕವಿ ಒಂದು ಕಡೆ

ಪ್ರೇಮವೆಂಬುದು ಕೇಳು ಸಾದಿಗೆಲ್ಲವು ಗೊತ್ತು
ಬಗ್ದಾದ ಜನರರಬ ಭಾಷೆಯನು ಬಲ್ಲಷ್ಟು

ಎಂದು ಹೇಳುತ್ತಾನೆ. ಇನ್ನೊಮ್ಮೆ ತಾನು ದಾಮಿಷ್ಕ (ಡಾಮಸ್ಕಸ್) ಪಟ್ಟಣದಲ್ಲಿದ್ದಾಗಿನ ಒಂದು ಸಂದರ್ಭವನ್ನು ಹೀಗೆ ಹೇಳುತ್ತಾನೆ. 'ದಾಮಿಷ್ಕ ಪಟ್ಟಣದ ಪ್ರಾರ್ಥನಾಲಯದಲ್ಲಿ ಕೆಲವಂದಿ ವಿದ್ವಾಂಸರೊಡನಿದ್ದೆ ತರ್ಕದಲಿ, ಬೇಗದಲಿ ಒಳಹೊಕ್ಕು ಯುವಕನೊಬ್ಬನು ನಮ್ಮ ಕೇಳಿದನು, ಬಲ್ಲಿರೇ ನಿಮ್ಮೊಳಗೆ ಪಾರಸಿಯ ಭಾಷೆಯನು ಆರಾದರೂ ಎಂದು. ಅವರೆನ್ನ ತೋರಿದರು. ಅಹುದೆಂದೆ. ಹೇಳಿದನು ಆ ಯುವಕ ಒಂದುನೂರೈವತ್ತು ವರ್ಷವಾಗಿಹೆಯೊಬ್ಬ ಮುದುಕನಿಗೆ, ಸಾಯುತಿರುವನು ಅವನು. ಪಾರಸಿಯುಲೇನನೊ ಹೇಳಿಕೊಳ್ಳುತಲಿರುವ, ನಮಗೆ ಬಾರದು ಭಾಷೆ. ಶಾಸನವ ಬರಸುವನೊ, ಬಂದೆಯಾದೊಡೆ ನಿನಗೆ ಲಾಭವಾಗಲು ಬಹುದು;' ಇತ್ಯಾದಿ. ಇನ್ನೊಂದು ಕತೆ ಕಾಷ್ಗರ್ ಪಟ್ಟಣಕ್ಕೆ ಸಂಬಂಧಿಸಿದ್ದು. ಹೀಗಿದೆ: 'ಅಂದು ಸುಲ್ತಾನ್ ಮುಹಮುದ್ ಕಾರಸಂ-ಷಹನು ರಾಜಕಾರಣಕಾಗಿ ಖೋತಾದ ದೊರೆಯೊಡನೆ ಒಪ್ಪಂದವನು ಮಾಡಿಕೊಂಡಿದ್ದ ತರುಣದಲಿ ಕಾಷ್ಗರದ ಪಟ್ಟಣಕೆ ಹೋಗಿದ್ದೆ. ಅಲ್ಲಿನಾ

ಪ್ರಾರ್ಥನಾಲಯದಲ್ಲಿ ನಾ ಕಂಡೆನೆಳೆಯನನು ರೂಪವನದೆಷ್ಟೊಪ್ಪು, ಏನು ಮೀರಿದ ಚೆಲುವು, ಇವನ ಹೋಲಿಕೆಯನೇ ಕಂಡು ಹೇಳಿರ ಬಹುದು :

> ಒಡೆಯ ಕಲಿಸಿದ ನಿನಗೆ ರೂಪಕೆ ಒಪ್ಪಿ ನಡೆಯುವ ರೀತಿಯ.
> ಮನವ ಹಿಡಿವೀ ಸಕಲ ವಯ್ಯಾರಗಳ ಕಲಿಸಿದನಾತನೇ.
> ಇಂಥ ರೂಪವನಿಂಥ ನಡೆನುಡಿ ರೀತಿ ಲೋಕದಿ ಕಾಣೆನು,
> ಸುರರೆ ಗುರುಗಳೊ ಕಾಣೆ ಕಣ್ಮನವಿಂದು ಸೆಳೆಯುವ ವಿದ್ಯೆಗೇ.

ಒಂದರಬಿ ವ್ಯಾಕರಣವನು ಹಿಡಿದು ಎಳೆಯ ಹೇಳುತಲಿದ್ದ ಜೈದ ಹೊಡೆದನು ಅಮ್ರುವಾ. ಕೇಳಿದೆನು, ಮಗು, ಈಗ ಕಾರಸಂ ಖೋತಾಯಿ ದೊರೆಗಳಿಗೆ ಶಾಂತಿಯಾದಂತಾಯ್ತು. ಇನ್ನು ನಡೆದಿಹುದಲ್ಲ ಜೈದ ಅಮ್ರುಯುದ್ಧ ? ನಕ್ಕವನು ಕೇಳಿದ್ದನು ಆವುದೆನ್ನೆಡೆಯೆಂದು. ಷೀರಾಜ ಪುಣ್ಯಭೂಮಿಯುಯೆಂದು ಉತ್ತರವ ಹೇಳಿದೆನು. ಕೇಳಿದನು ಬಲ್ಲೆಯಾ ಸಾದಿ ಬರೆದಿಹ ಪದ್ಯಗಳನೆಂದು. ವ್ಯಾಕರಣ ಓದುವನ ಕಂಡೆನಗೆ ಮಾರುವೋದುದು ಚಿತ್ತ, ಅಹನು ಕೋಪಿಸಿ ಎನ್ನ ಜೈದ-ನಮ್ರುವ ಹೊಡೆದ ರೀತಿಯಲಿ ಹೊಡೆಯೆ ಬರುತಿಹನೆಂದು ಅರಬಿಯಲಿ ಹೇಳಿದೆನು. ಮತ್ತೆ ಹೇಳಿದವನು, ಇಲ್ಲೆಲ್ಲ ಸಾದಿಯಾ ಪದ್ಯಗಳ ಪಾರಸಿಯ ಭಾಷೆಯಲಿ ಓದುವೆವು ನೀನಾದರೂ ಅದಕೆ ಹೇಳಿದೊಡೆ ಅರ್ಥವಾಗುವುದೆನಗೆ,' ಇತ್ಯಾದಿ

ಮುಸಲ್ಮಾನರಾಜ್ಯದ ಅರಗಿನಲ್ಲಿದ್ದ ಪ್ಯಾಲೆಸ್ಟೈನ ಪ್ರಾಂತದಲ್ಲಿ ಯುರೋಪಿನ ಕಡೆಯಿಂದ ಈಸಾಯಿಗಳು ಬಂದು ಮುತ್ತಿಗೆ ನಡೆಸುತ್ತಿದ್ದರು. ಆಗ ಕ್ರೂಸೇಡುಗಳ ಕಾಲ. ಈಸಾಯಿಗಳ ಈ ಸಂಪರ್ಕವನ್ನು ಸಾದಿ ಒಂದು ಕತೆಯಲ್ಲಿ ಹೇಳಿದ್ದಾನೆ. 'ದಾಮಿಸ್ಕ ಪಟ್ಟಣದ ಸ್ನೇಹಿತರ ಗೆಳೆತನಕೆ ಬೇಸರಿಸಿ ಈಸಾಯಿಗಳ ಕ್ಷೇತ್ರದೆಡೆ ಮೃಗಗಳಾ ಸಹವಾಸವಿರಲೆಂದು ಓಡಾಡಿಕೊಂಡಿದ್ದೆ. ಹಿಡಿದರು ಪರಂಗಿಗಳು ಆಗೆನ್ನ; ಎಹುದಿಗಳ ಜೊತೆಯಲ್ಲಿ ತ್ರಾಬಲ್ಸನಗರ (ಟ್ರಿಪೊಲಿ)ದಲಿ ಕಂದಕವನಗೆಯುವ ಕೆಲಸಕ್ಕೆ ಹಾಕಿದರು' ಮುಂತಾಗಿ.

ಆಕಡೆ ಈಸಾಯಿಗಳ ಒತ್ತಡ, ಇನ್ನೊಂದು ಕಡೆ ಮಂಗೋಲರ ದಾಳಿ ಪರ್ಷಿಯದ ಮೇಲೆ ಸಾದಿಯ ಕಾಲದಲ್ಲಿಯೇ ಆಯಿತು. ಮಂಗೋಲರು ಮುಸಲ್ಮಾನರಾಗಿರಲಿಲ್ಲ; ಅವರ ಮತವೇ ಬೇರೆ. ಇದನ್ನು ತಿಳಿದು ಮಹಮದೀಯರಿಗೆ ಎದುರಾಗಿ ಈಸಾಯಿಗಳು ಇವರೊಡನೆ ಸಂಚುನಡೆಸಿದುದುಂಟೆಂದು ಚರಿತ್ರೆಯಿಂದ ಗೊತ್ತಾಗುತ್ತದೆ ಪರ್ಷಿಯಾದ ಕಡೆ ಸೈನ್ಯ ತೆಗೆದುಕೊಂಡು ಹೊರಟ ಮಂಗೋಲರ ದಳವಾಯಿ ಪ್ಯಾಲೆಸ್ಟೈನ್ ಪ್ರಾಂತವನ್ನು ಮಹಮದೀಯರಿಂದ ಕಿತ್ತು ಈಸಾಯಿಗಳಿಗೆ ಕೊಡಲು ಅಲ್ಲಿಯವರೆಗೂ ಹೋಗಿದ್ದವನು ಅನಿವಾರ್ಯದಿಂದ ಹಿಂದಿರುಗಿ ಬಂದನಂತೆ. ಎಂತೂ ಮಂಗೋಲರು ಪರ್ಷಿಯಾವನ್ನೇನೋ ಹಿಡಿದರು. ದಳವಾಯಿ ಹುಲಿಗೋಖಾನನು ಅಲ್ಲಿ ತನ್ನದೇ ಆದ ರಾಜ್ಯವನ್ನು ಸ್ಥಾಪಿಸಿದನು. ಈ ಅರಸುಮನೆತನಕ್ಕೂ ನೆರೆಯ ಈಸಾಯಿ ಮನೆತನಗಳಿಗೂ ಸಂಬಂಧಕೂಡ ಬೆಳೆದಿದ್ದಿತೆಂದು ಕಾಣುತ್ತದೆ. ಆದರೆ ಈ ಮಂಗೋಲರಸರ ಮಂತ್ರಿಗಳು ಮುಸಲ್ಮಾನರಾಗಿದ್ದರು. ಬರಬರುತ್ತ ಎರಡು ಮೂರನೆ ತಲೆಯಲ್ಲಿ ಮಂಗೋಲರು ಮುಸಲ್ಮಾನರಾದಂತೆ ತಿಳಿಯುತ್ತದೆ. ಹೀಗಾಗಿ ಮಹಮದೀಯ ಮತವೂ ಉಳಿಯಿತು, ಪರ್ಷಿಯನ್ ಸಾಹಿತ್ಯವೂ ಉಳಿಯಿತು. ಇದಕ್ಕೆ ಮೊದಲು ಒಂದು ರಾಜಮನೆತನಕ್ಕೂ ಇನ್ನೊಂದಕ್ಕೂ ಜಗಳಗಳಾಗುತ್ತಿದ್ದು ಒಗ್ಗಟ್ಟಿರಲಿಲ್ಲ; ಮಂಗೋಲರ ಆಳ್ವಿಕೆಯಲ್ಲಿ ದೇಶವೆಲ್ಲಾ ಒಂದು ಹಿಡಿತಕ್ಕೆ ಸಿಕ್ಕಿದ್ದರಿಂದ ಮತದಲ್ಲಿ ಭಿನ್ನತೆಯಿದ್ದರೂ ಒಟ್ಟು ಪಾರ್ಸಿ ಸಾಹಿತ್ಯ ಸಂಸ್ಕೃತಿಗಳಿಗೆ ಒಂದು ಬಗೆಯ ಅನುಕೂಲವೇ ಆಯಿತೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ.

ಹೀಗೆ ಸ್ವಲ್ಪಮಟ್ಟಿಗೆ ದೇಶಕಾಲಗಳ ಊಹೆಯಾದ ಮೇಲೆ ಸಾದಿಯ ಜೀವನ ಚರಿತ್ರೆಯ ಕಡೆಗೆ ಸ್ವಲ್ಪ ದೃಷ್ಟಿಯನ್ನು ಹೊರಳಿಸಬಹುದು. ಇವನು ದಕ್ಷಿಣ ಪರ್ಷಿಯಾದ ಮುಖ್ಯಸ್ಥಳವಾಗಿದ್ದ ಷೀರಾಜಿನಲ್ಲಿ ಸುಮಾರು ೧೧೮೪ರಲ್ಲಿ ಹುಟ್ಟಿದನು. ಇದರ ವಿಚಾರದಲ್ಲಿ ಸ್ವಲ್ಪ ವಾದವಿವಾದಗಳಿವೆ. ಆದರೆ ಹುಟ್ಟು ಸಾವುಗಳ ತಾರೀಖುಗಳ ವಿಷಯದಲ್ಲಿ ಏನೇ ವಿವಾದವಿದ್ದರೂ ಇವನು ಸುಮಾರು ೧೦೦ ವರ್ಷಗಳಿಗೂ

ಮೇಲೆ ಬದುಕಿದ್ದುದನ್ನು ಎಲ್ಲರೂ ಹೇಳುತ್ತಾರೆ. ಇವನು ಕಾಲವಾದದ್ದು ಸುಮಾರು ಕ್ರಿ. ಶ. ೧೨೯೨ ರಲ್ಲಿ.

ಸಾದಿಯ ತಂದೆಗೆ ಷೀರಾಜಿನ ದೊರೆಗಳ ಬಳಿಯಲ್ಲಿ ಕೆಲಸವಿತ್ತು. ಮಕ್ಕಾಕ್ಕೆ ಹೋಗುತ್ತಿದ್ದ ಯಾತ್ರಿಕರ ಅನುಕೂಲಗಳನ್ನು ನೋಡಿ ಕೊಳ್ಳುತ್ತಿದ್ದನಂತೆ.

ಇನ್ನೂ ಸಾದಿ ಚಿಕ್ಕವನಾಗಿರುವಾಗಲೇ ತಂದೆ ತೀರಿಹೋಗಲಾಗಿ ದೊರೆಯಾದ ಸಾದ್‌ಬಿನ್‌ಜಂಗಿ ಇವನನ್ನು ಕೈಹಿಡಿದು ಮುಂದಕ್ಕೆ ತಂದನೆಂದು ಗೊತ್ತಾಗುತ್ತದೆ. ದೊರೆಯ ನೆನಪಿಗಾಗಿಯೇ ಕವಿ ಸಾದಿ ಎಂಬ ಹೆಸರನ್ನು ಇಟ್ಟುಕೊಂಡುದು. ಮೊದಲು ಇವನಿಗೆ ಮುಸ್ಲಹುದ್ದೀನ್ ಎಂದು ನಾಮಕರಣವಾಗಿತ್ತು.

ದೊರೆಯ ಸಹಾಯದಿಂದ ಸಾದಿಯ ಹೆಚ್ಚಿನ ವಿದ್ಯಾಭ್ಯಾಸವೆಲ್ಲಾ ಬಗ್ದಾದಿನ ನಿಜಾಮಿಯ ವಿಶ್ವವಿದ್ಯಾಲಯದಲ್ಲಿ ನಡೆಯಿತು ಅವನು ವಿದ್ಯಾಲಯದ ಆವರಣದ ಹೊರಗಿದ್ದ ಹಿರಿಯ ಸಾಹಿತಿಗಳನ್ನು ಕೂಡ ಅನುಸರಿಸಿ ಅನೇಕ ವಿಷಯಗಳನ್ನು ಸಂಗ್ರಹಿಸಿದನೆಂದು ತಿಳಿಯುತ್ತದೆ. ಅರಬ್ಬಿ ಪಾರಸಿ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯ ಸಂಪಾದನೆಮಾಡಿ, ಮತಧರ್ಮವನ್ನು ಚೆನ್ನಾಗಿ ಅರಿತು ಸೂಫಿತತ್ವವನ್ನೂ ಮನನಮಾಡಿ ಕೊಂಡು, ವಿದ್ಯಾಭ್ಯಾಸದ ಕಾಲದಲ್ಲಿಯೇ ಕವಿತಾಶಕ್ತಿಯನ್ನು ತೋರ್ಪಡಿಸಿ ಪರ್ಷಿಯದ ಪಶ್ಚಿಮದ ಗಡಿಯಿಂದ ಪೂರ್ವದ ಗಡಿಯ ವರೆಗೆ ಆಗಾಗ ಸಂಚಾರಮಾಡಿದ್ದನೆಂದು ಕಾಣಬರುತ್ತದೆ.

ಸಾದಿಯ ಜೀವಮಾನವನ್ನು ಸಾಧಾರಣವಾಗಿ ವಿದ್ಯಾಭ್ಯಾಸದ ಕಾಲ, ದೇಶಾಟನೆಯ ಕಾಲ, ಆ ಮೇಲಿನ ಕಾಲ ಎಂದು ಮೂರು ಭಾಗವಾಗಿ ವಿಂಗಡಿಸಬಹುದು. ವಿದ್ಯಾಭ್ಯಾಸದೊಂದು ಕಾಲ ಮುಗಿದು, ಅವನು ಎಲ್ಲಿಗೋ ಹೋಗಿದ್ದವನು ಷೀರಾಜಿಗೆ ಬಂದು ನೋಡುವಾಗ್ಗೆ ಶತ್ರುಗಳು ಅವನಿಗೆ ಸಹಾಯ ಮಾಡಿದ ದೊರೆಯನ್ನು ಸೋಲಿಸಿ ರಾಜ್ಯ ವನ್ನು ಕಿತ್ತುಕೊಂಡಿದ್ದರು. ಟಾರ್ಟರರ ದಾಳಿಗಳೂ ನಡೆಯುತ್ತಿದ್ದವು. ಮನಸ್ಸಿಗೆ ಖೇದವಾಗಿ ಸಾದಿ ದೇಶಾಟನೆಗೆ ಪ್ರಾರಂಭಮಾಡಿದನು.

ಹಿಂದೂಸ್ಥಾನದಲ್ಲಿ ಗುಜರಾತ್ ದೆಹಲಿಗಳವರೆಗೂ ಬಂದಿದ್ದು, ಪಶ್ಚಿಮದಲ್ಲಿ ಈಜಿಪ್ಟ್ ಅಬಿಸೀನಿಯಾಗಳವರೆಗೂ ಸಂಚಾರಮಾಡಿ, ಅಲ್ಲಿ ಸ್ವಲ್ಪ ಕಾಲ ಇಲ್ಲಿ ಸ್ವಲ್ಪಕಾಲ ವಾಸವಾಗಿದ್ದನು. ಡಾಮಿಸ್ಕ ಪಟ್ಟಣದಲ್ಲಿ ಒಳ್ಳೆ ಸಾಹುಕಾರನಾಗಿ ಕೆಲವು ಕಾಲ ಕಳೆದನೆಂದು ಹೇಳುತ್ತಾರೆ. ಎರಡು ಸಲ ಮದುವೆಯಾಗಿದ್ದನೆಂದು ತಿಳಿಯಬರುತ್ತದೆ. ಅಂತೂ ಒಬ್ಬಂಟಿಗನಾಗಿ ಷೀರಾಜಿನ ನೆನಪುಮಾಡಿಕೊಂಡು ಇವನು ಹಿಂದಿರುಗುವಾಗ್ಗೆ ಇವನಿಗೆ ೭೦ ವರುಷ ವಯಸ್ಸಾಗಿತ್ತು. ಆಗ ಸಾದ್-ಬಿನ್-ಜಂಗಿಯ ಮೊಮ್ಮಗನಾದ ಅಬೂಬಕರ್-ಬಿನ್-ಸಾದನು ಷೀರಾಜಿನಲ್ಲಿ ಆಳುತ್ತಿದ್ದನು. ಆಗಲೇ ಸಾದಿ ತನ್ನ ಗುಲಿಸ್ತಾನ್ ಮತ್ತು ಬೋಸ್ತಾನ್ ಗ್ರಂಥಗಳನ್ನು ಬರೆದುದು.

ಷೀರಾಜಿಗೆ ಹಿಂದಿರುಗಿ ಇವನು ಮೂವತ್ತು ವರುಷಗಳ ಕಾಲವಾದರೂ ಬದುಕಿದ್ದಿರಬೇಕು. ಅತ್ತ ಮಂಗೋಲರಸರು ತಬ್ರೀಜ್ ಮುಂತಾದೆಡೆಗಳಲ್ಲಿ ತಳವೂರಿ, ಬಗ್ದಾದ ಮುಂತಾದ ಪಟ್ಟಣಗಳನ್ನು ಲೂಟಿಮಾಡಿ ತಮ್ಮ ರಾಜ್ಯವನ್ನು ಸ್ಥಾಪಿಸಿ ಎರಡು ಮೂರು ತಲೆಗಳವರೆಗೆ ಆಳಿದರು. ಇತ್ತ ಷೀರಾಜಿನ ರಾಜಮನೆತನ ಹೋಗಿ ಅಲ್ಲಿ ಮಂಗೋಲ್ ಅಥವಾ ಟಾರ್ಟರ ದೊರೆಗಳ ಅಧೀನರಾದ ಅಧಿಕಾರಿಗಳ ಆಡಳಿತ ಪ್ರಾರಂಭವಾಯಿತು. ಈ ರಾಜಕೀಯ ಬದಲಾವಣೆಗಳಲ್ಲಿ ಎಲ್ಲಾ ಅಧಿಕಾರಿಗಳೂ ಸಾದಿಯನ್ನೇನೊ ಪೂಜ್ಯಭಾವದಿಂದಲೇ ಕಂಡುಕೊಂಡಿದ್ದರಂತೆ. ಇದು ಸಾದಿಯ ಜೀವಮಾನದ ಮೂರನೆಯ ಭಾಗ. ಮಂಗೋಲರಸರ ಬಳಿ ಮಂತ್ರಿಗಳಾಗಿದ್ದ ಜೂಅನಿ ಸಹೋದರರು ಸಾದಿಗೆ ಬೇಕಾದ ಹಾಗೆ ಹಣ ಕಳಿಸಿಕೊಟ್ಟು ಸಹಾಯಮಾಡಿದುದಾಗಿ ತಿಳಿಯುತ್ತದೆ.

ಒಮ್ಮೆ ಸಾದಿ ಮಕ್ಕಾಯಾತ್ರೆಗೆ ಹೋಗಿ ತಬ್ರೀಜ್ ಮಾರ್ಗವಾಗಿ ಬರುತ್ತಿದ್ದನಂತೆ. ಹುಲಾಗುಖಾನನ ಮಗ ಅಬಾಕಾಖಾನನೂ, ಅವನ ಮಂತ್ರಿಗಳಾದ ಜೂಅನಿ ಸಹೋದರರೂ ಕುದುರೆಗಳನ್ನೇರಿ ಹೋಗುತ್ತ ಇವನನ್ನು ಕಂಡರು. ಆ ಸಹೋದರರು ಕುದುರೆಗಳಿಂದ ಇಳಿದು

ಸಾದಿಗೆ ಅತಿವಿನಯದಿಂದ ನಮಸ್ಕಾರಮಾಡಿ ಕ್ಷೇಮಸಮಾಚಾರ ಕೇಳಿದರಂತೆ. ದೊರೆಗೆ ಇವರು ನನಗೆ ಕೂಡ ತೋರಿಸದ ವಿನಯವನ್ನು ಪಾದಚಾರಿಯಾದ ಈತನಿಗೆ ತೋರಿಸಿದರಲ್ಲಾ ಎನ್ನಿಸಿತು. ಅವರು ಮತ್ತೆ ಕುದುರೆಗಳನ್ನೇರಿ ಸ್ವಲ್ಪ ದೂರ ಸಾಗಿದ ಮೇಲೆ ಇವನಾರು ಎಂದು ದೊರೆ ಆ ಸಹೋದರರನ್ನು ಕೇಳಿದನಂತೆ. ಈತನು ನಮ್ಮ ತಂದೆ ಎಂದು ಅವರು ಹೇಳಿದರು. ನಿಮ್ಮ ತಂದೆ ಹೋಗಿ ಬಹಳ ದಿನ ವಾಯಿತೆಂದು ಕೇಳಿದ್ದೇನೆ, ಇದೇನು ಸೋಜಿಗ ಎಂದನಂತೆ ದೊರೆ. ತಂದೆ ನಮ್ಮನ್ನು ಬಿಟ್ಟು ಹೋದ, ಈತ ನಮಗೆ ವಿದ್ಯಾಬುದ್ಧಿಗಳನ್ನು ಕಲಿಸಿ ತಂದೆಯಾದ ಎಂದು ಅವರು ಹೇಳಿದರಂತೆ. ಇಂತಹ ಪೂಜ್ಯ ನಾದವನನ್ನು ಆಸ್ಥಾನಕ್ಕೆ ಬರಹೇಳಬೇಕೆಂದು ದೊರೆಯ ಅಪ್ಪಣೆ ಯಾಯಿತು. ಸಾದಿ ಎಷ್ಟು ಆಗದೆಂದರೂ ಬಿಡದೆ ಆ ಸಹೋದರರು ಸಾದಿಯನ್ನು ದೊರೆಯ ಬಳಿ ಕರೆದುಕೊಂಡು ಹೋದರು. ಮಾತು ಕತೆ ನಡೆದ ಮೇಲೆ ತಾವು ನನಗೆ ಏನಾದರೂ ಬುದ್ಧಿವಾದವನ್ನು ಹೇಳಿ ಹೋಗಬೇಕೆಂದು ದೊರೆ ಕೇಳಿದನಂತೆ. 'ರೈತರ ಸುಖವನ್ನೇ ದೃಷ್ಟಿ ಯಲ್ಲಿಟ್ಟಿರುವ ದೊರೆಗೆ ಎಷ್ಟು ದುಡ್ಡು ಕೂಡಿಹಾಕಿದರೂ ಅಷ್ಟೂ ಅಷ್ಟು ಪುಣ್ಯ ಗಳಿಸಿದ ಹಾಗೆ. ರೈತರ ಹಿತಕಾಂಕ್ಷಿಯಲ್ಲದ ದೊರೆಗೆ ತಲೆಗಂದಾಯ ಹಾಕಿ ಎತ್ತಿದ ದುಡ್ಡು ಅಷ್ಟೂ ಅಷ್ಟು ಕಾಲಸರ್ಪದ ವಿಷ ಇದ್ದ ಹಾಗೆ' ಎಂದು ಸಾದಿ ನುಡಿದನಂತೆ. ಆಬಾಕಾ ದೊರೆಗೆ ಕಣ್ಣಿನಲ್ಲಿ ನೀರು ಬಂದು ನಾನು ರೈತರ ಹಿತಚಿಂತಕನೇ, ಅಲ್ಲವೆ ಎಂದು ಕೇಳಿದನಂತೆ. ಸಾದಿ ತಾವು ರೈತರ ಹಿತಚಿಂತಕರಾದರೆ ಪದ್ಯದ ಮೊದಲು ನಿಮಗೆ ಅನ್ವಯಿಸುತ್ತದೆ, ಇಲ್ಲದಿದ್ದರೆ ಪದ್ಯದ ಎರಡನೆಯ ಸಾಲು ಅನ್ವಯಿಸುತ್ತದೆ ಎಂದು ದೊರೆಯ ಸಮ್ಮುಖದಿಂದ ಹಿಂತಿರುಗಿದನಂತೆ.

ಸಾದಿ ತೀರ ಶ್ರೀಮಂತನಲ್ಲದಿದ್ದರೂ ತೀರ ನಿರ್ಗತಿಕನೂ ಆಗಿರ ಲಿಲ್ಲವೆಂಬುದು ಈ ಜೀವನ ಪರಿಚಯದಿಂದ ವ್ಯಕ್ತವಾಗುತ್ತದೆ. 'ಕಾಲ ತಿರುಗಿತು ಎಂದು ಅತ್ತು ಗೋಳಾಡಿದವನಲ್ಲ. ದೈವಾಜ್ಞೆಗೆಂದು ಬೇಸ ರಿಸಿದವ ನಾನಲ್ಲ' ಎಂದು ಅವನು ಹೇಳಿರುವುದರಲ್ಲಿ ಔಚಿತ್ಯ ಉಂಟು.

ಅದೇ ಕತೆಯನ್ನು ಮುಂದುವರಿಸಿ 'ಇಂತಿರ್ದ ದಿನದೊಮ್ಮೆ ಬರಿಕಾಲೊಳಿರುತಿರುತ ಅದಕೆ ರಕ್ಷಣೆಯ ಕೊಡಲರಿಯದಲೆ ನೊಂದುಕೊಳ್ಳುತಲಿದ್ದೆ. ಆಶೆಯೆಲ್ಲ ನಿರಾಶೆಯಾಗಿರಲು ಕೂಫಾದ ಪ್ರಾರ್ಥನಾಲಯದೊಳಗೆ ಹೋಗುತ್ತ ನಾ ಕಂಡೆ ಕಾಲುಗಳೆ ಇಲ್ಲದವನೊಬ್ಬನನು. ದೇವನಾ ಕರುಣೆಯನು ಸ್ಮರಿಸಿದೆನು ನಾನಾಗ, ಕಾಲು ಕೊಟ್ಟಿಹನಲ್ಲ, ಪಾದ ರಕ್ಷೆಯು ಮಾತ್ರ ಇಲ್ಲದಿರಲೇನೆಂದು' ಎಂದು ಹೇಳಿರುವುದರಲ್ಲಿ ಒಂದು ಬಡತನದ ಸೂಚನೆಗಿಂತಲೂ ಒಂದು ತೃಪ್ತಿಯ ಉದಾಹರಣೆಗೇ ಪ್ರಾಮುಖ್ಯತೆ ಎನ್ನಬೇಕು. ಜನಗಳು ಸಾದಿಯ ಹತ್ತಿರ ಬಂದು ತಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದುದೂ ಉಂಟೆಂದು ಕಾಣುತ್ತದೆ. ಇಂತಹ ಒಂದು ಸನ್ನಿವೇಶವನ್ನು ಒಂದು ಕತೆಯಲ್ಲಿ ಹೇಳಿದ್ದಾನೆ. ಹೀಗೆಂದು: 'ಒಮ್ಮೆ ಸ್ನೇಹಿತನೊಬ್ಬ ಹೇಳಿಕೊಂಡವನ ದುರ್ದೆಶೆಯ ಬಂದನೆನ್ನೆಡೆಗೆ ......ಲೆಕ್ಕ ಪತ್ರದ ವಿದ್ಯೆ ತಿಳಿದಿಹುದು ಎನಗಿನಿತು. ನೀನು ಹೇಳಿದೊಡೊಂದು ಸ್ಥಳವ ಕೊಡಬಹುದೆನಗೆ ಅಧಿಕಾರಿಗಳು............ಎನ್ನ ಗೆಳೆಯನಾಗಿರುತಿದ್ದ ಭಂಡಾರದಧಿಕಾರಿ. ಹೋಗಿ ಹೇಳಿದೆನಾತನಿಗೆ ಇವನು ಕಲಿತವನು, ಬಲ್ಲವನು, ಕೆಲಸಗಾರನು ಎಂದು. ಇದನು ಮನ್ನಿಸಿ ಅವರು ಸಣ್ಣದೊಂದಧಿಕಾರದೊಳಗವನ ನಿಲಿಸಿದರು.' ಇದರಿಂದ ಸಾದಿಯ ಅಂತಸ್ತಿನ ಒಂದು ಊಹೆ ಬರಬಹುದು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಅವನು ತಾನು ದರ್ವೇಷ, ಬಡವ ಎಂದು ಹೇಳಿಕೊಂಡಿರುವೆಡೆಗಳಲ್ಲಿ ಸಮಯೋಚಿತವಾಗಿ ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಇನ್ನು ಸಾದಿಯ ಹೆಸರನ್ನು ಕವಿಗಳ ಪಂಗಡದಲ್ಲಿ ಸೇರಿಸುವುದೆಂಬುದನ್ನು ಸ್ವಲ್ಪ ವಿಮರ್ಶೆಮಾಡಬಹುದು. ಕನ್ನಡಿಗರಿಗೆ ಒಂದು ವಿಧದಲ್ಲಿ ಆಗಲೇ ಈ ಕವಿಗಳ ಪರಿಚಯವಾಗಿದೆ ಎನ್ನಬಹುದು. ಒಬ್ಬನು ಫರ್ದೂಸಿ. ಇವನು ಷಾಹನಾಮ ಮಹಾಕಾವ್ಯವನ್ನು ಬರೆದು ಪ್ರಸಿದ್ಧನಾಗಿದ್ದಾನೆ. ಸೊಹ್ರಾಬ್-ರುಸ್ತುಂ ಕತೆ ಈ ಮಹಾಕಾವ್ಯದಿಂದಲೇ ಆಯ್ದುದು. ಪರ್ಷಿಯಾದಲ್ಲಿ ಅನಾದಿಕಾಲದಿಂದ ಬಂದ ರಾಜರ ಕತೆಗಳೆಲ್ಲವೂ ಈ ಗ್ರಂಥ

ದಲ್ಲಿ ಅಡಕವಾಗಿದೆ. ಆದುದರಿಂದ ಇದಕ್ಕೆ ಪರ್ಶಿಯನ್ ಸಾಹಿತ್ಯದಲ್ಲಿ ಒಂದು ಮಹತ್ವದ ಸ್ಥಾನವುಂಟು. ಇವನು ಸಾದಿಗೆ ಕೆಲವು ಶತಮಾನ ಗಳ ಹಿಂದಿನವನು.

ಉಮರ ಖಯಾಮನೂ ಸಾದಿಗೆ ಹಿಂದಿನವನು ಎನ್ನಬೇಕು. ಇವನು ಇವನ ರುಬಾಯಿಗಳಿಂದ ಹೆಸರು ಗಳಿಸಿದ್ದಾನೆ. ರುಬಾಯಿ ಗಳನ್ನು ಒಟ್ಟಾಗಿ ತೆಗೆದುಕೊಂಡು ನೋಡಿದರೆ 'ಜೀವ ಸತ್ತಮೇಲೇ ನಾಗುತ್ತದೆಯೋ ಅದನ್ನು ಕಟ್ಟಿಕೊಂಡೇನು, ಇರುವಾಗ ಸಂತೋಷ ಪಡದೆ ಏತಕ್ಕೆ ನವೆಯಬೇಕು' ಎಂಬ ಧ್ವನಿ ಹೊರಡುತ್ತದೆ. ಅನೇಕ ಪದ್ಯಗಳನ್ನು ನೋಡಿದರೆ ಇವನು ನಾಸ್ತಿಕನೆಂದೇನೂ ಹೇಳುವುದಕ್ಕಾ ಗುವುದಿಲ್ಲ. ಬರೀ ಸಂಪ್ರದಾಯದ ತರ್ಕವಾದಗಳನ್ನು ಬದಿಗಿರಿಸುವ ಬೋಧನೆಯನ್ನು ಹೂಡಿಯೂ ಕೂಡ, ಈ ನೆಳಲುಗೊಂಬೆಗಳಾಟವೇನು, ನಾನು ನಾನೆಂಬ ಹೆಮ್ಮೆಯನ್ನು ತೋರಿಸಿದ ಮಾನವನು ದೈವದ ಕರ್ತೃತ್ವವನ್ನು ಪ್ರಶ್ನಿಸಿದಂತಾಗುವುದಿಲ್ಲವೇ ಮುಂತಾದ ಆಳವಾದ ಭಾವನೆಗಳ ಕಡೆಗೂ ಮನಸ್ಸನ್ನೆಳೆಯುತ್ತವೆ, ಈ ಪದ್ಯಗಳು. ಉಮರನು ಸೂಫಿ ಪಂಥದವನೆಂದು ನಿರ್ವಿವಾದವಾಗಿ ಹೇಳಿಬಿಡಬಹುದೆ, ಎಂದರೆ ಆ ಪದ್ಯಗಳಲ್ಲಿನ ಚೆಲುವೆ, ಗುಲಾಬಿ, ಮಧುಗಳು ಬಹುಮಟ್ಟಿಗೆ ಪ್ರಪಂ ಚಕ್ಕೆ ಸೇರಿದವರೇ ಆಗಿ ಕಾಣುತ್ತಾರೆ, ಅದಕ್ಕೆ ಹೊರತಾಗಿ ಕಾಣುವು ದಿಲ್ಲ. ಒಟ್ಟಿನಲ್ಲಿ ಉಮರನು ಹಾಡಿರುವುದು ಒಂದು ಮಹತ್ತರವಾದ ಭಾವಗೀತೆ. ಇದರಲ್ಲಿ ವಿಮರ್ಶಕರು ಒಂದು ಬಗೆಯ ಸ್ವತಂತ್ರತೆ ಯನ್ನು ಕಂಡಿದ್ದಾರೆ.

ಉಮರನಾದ ಮೇಲೆ ಬಂದ ಹಾಫಿಸ್ ಮುಂತಾದ ಕವಿಗಳು ಅವನಂತೆಯೇ ಸ್ವತಂತ್ರ ಮಾರ್ಗವನ್ನು ಹಿಡಿದರೆಂದು ಹೇಳುವುದಕ್ಕೆ ಅವಕಾಶವಿದೆ. ಹಾಫಿಸ್‌ನನ್ನು ಭಾವಗೀತೆಗಳನ್ನು ಬರೆದ ಪರ್ಶಿಯದ ಕವಿಗಳಲ್ಲೆಲ್ಲಾ ಮೇಲಾದವನು— The greatest lyric poet of Persia—ಎಂದು ಕರೆದಿದ್ದಾರೆ. ಆದರೆ ಅವನು ಅಂಧಶ್ರದ್ಧೆಯಿಂದ ನಡೆಯುತ್ತಿದ್ದ ಆಚಾರಶೀಲರನ್ನು ಹಿಯ್ಯಾಳಿಸುತ್ತಿದ್ದುದನ್ನು ನೋಡಿ

ಅವರು ಇವನಿಗೆ ಒಂದು ಗೋರಿ ಮಾಡಲು ಕೂಡ ಹಿಂಜರಿದಿದ್ದರಂತೆ. ಏನು ಮಾಡಬೇಕೆಂದು ಸಂಶಯದಲ್ಲಿ ಇವನ ಪುಸ್ತಕವನ್ನೇ ತೆಗೆದು ನೋಡಲಾಗಿ 'ಹಾಫಿಸನನ್ನು ಇವರು ಏತಕ್ಕೆ ದೂರ ಇಟ್ಟಿರುವರೋ ಕಾಣೆ, ಅವನು ಎಲ್ಲರಿಗೂ ಮುಂದಾಗಿಯೇ ಸ್ವರ್ಗಕ್ಕೆ ಸೇರುವನು' ಎಂಬರ್ಥದ ಪದ್ಯ ಕಂಡುಬಂದಿತಂತೆ. ಆಗ ಅವನಿಗೆ ಸರಿಯಾಗಿ ಗೋರಿ ಮಾಡಿದರು ಎಂದು ಐತಿಹ್ಯ.

ಹಾಫಿಸ್‌ನನ್ನು ಎರಡನೆಯ ಸಾದಿ ಎಂದು ಕರೆಯುವುದುಂಟು. ಸಾದಿ ಉಮರನ ಕಾಲಕ್ಕೂ ಹಾಫಿಸ್‌ನ ಕಾಲಕ್ಕೂ ನಡುವಿನವನು. ಎಂದರೆ ಸ್ವತಂತ್ರತೆಯ ವಿಷಯದಲ್ಲಿ ಈ ಮೂರು ಕವಿಗಳೂ ಒಂದು ಎಂದರೂ ಎನ್ನಬಹುದು. ಸಾದಿಯಾದಮೇಲೆ ಹಾಫಿಸನು ಬಂದುದರಿಂದ ಅವನು ತನಗೆ ಹಿಂದೆ ಇದ್ದ ಕವಿಯ ಭಾವನೆಗಳನ್ನು ಬಳಸಿಕೊಂಡಿರಬಹುದು. ಇವರಿಬ್ಬರೂ ಒಂದೇ ಊರಿನವರು.

ಸಾದಿಯು ಪ್ರೇಮಗೀತಗಳನ್ನು ಹಾಡಿದ್ದಾನೆ. ಹಾಫಿಸನೂ ಹಾಡಿದ್ದಾನೆ. ಹೂವು, ಹಕ್ಕಿ, ವನ ವೃಕ್ಷಗಳು ಇಬ್ಬರನ್ನೂ ಪ್ರೇರಿಸಿವೆ. ಆದರೆ ಕವಿತೆಯ ಒಂದು ಧೋರಣೆಯನ್ನು ಸಮಗ್ರವಾಗಿ ನೋಡಿದರೆ ಹಾಫಿಸನ ಒಲವು ಹಾಡಿನ ಕಡೆಗೆ, ಸಾದಿಯ ಒಲವು ಮಾತು, ಕತೆಯ ಕಡೆಗೆ. ಉಪದೇಶವನ್ನು ಕತೆಯಾಗಿ ಹೇಳುವುದು ಬಹುಕಾಲದಿಂದ ಬಂದದ್ದು. ಒಂದು ಮಣ್ಣುಹೆಂಟೆಯನ್ನು ಕುರಿತು ಸಾದಿ ಹೀಗೆ ಹೇಳಿದ್ದಾನೆ.

ತಂದಿತ್ತಳೊಂದು ದಿನ ಪರಿಮಳದ ಹೆಂಟೆಯನು
ಪ್ರಿಯತಮೆಯು, ಸ್ನಾನದಾ ಮನೆಯೊಳಗೆ ನಾನಿರಲು,
ಕೇಳಿದೆನು ಮಣ್ಣನ್ನು ಆವ ಗಂಧವು ನೀನು
ನಿನ್ನ ಪರಿಮಳವೆನ್ನ ಮರುಳುಮಾಡಿದೆಯೆಂದು.
ಹೇಳಿತದು ನಾನೊಂದು ಹೀನತರ ಮಣ್ಣಯ್ಯ
ಹೂವಿನಾ ಸಂಗದಲಿ ಇದ್ದೆನಾನನುಗಾಲ
ಗೆಳೆತನದ ಮಧುರತೆಯು ಗಂಧವಾಗಿಸಿತೆನ್ನ
ಇಲ್ಲದಿರೆ ಮಣ್ಣು ಮಣ್ಣೇ ನಾನು ನೋಡಯ್ಯ.

ಇದನ್ನೇ ಹಾಫಿಸನು

‘ ಆವ ಹೂವಿನ ಸಂಗ ನಿನಗಿತ್ತು ಪರಿಮಳವೆ,
ಆದರ ಆ ಮಧುರತೆಯು ಇನ್ನೆಷ್ಟು ಹೇಳೆನಗೆ ’

ಎಂದು ಹಾಡುತ್ತಿದ್ದನೋ ಏನೊ ? ಕತೆ ಹೇಳುವ ಉದ್ಯಮ ಹೋಗುತ್ತ ಹೋಗುತ್ತ ಸಾದಿಯನ್ನು ತನ್ನದೇ ಆದ ಒಂದು ಮಾರ್ಗಕ್ಕೆ ಕರೆದು ಕೊಂಡು ಹೋಗಿದೆ. ಗುಲಿಸ್ತಾನ್, ಬೋಸ್ತಾನ್ ಗ್ರಂಥಗಳು ಬಹುಶಃ ಕತೆಗಳ ಸಂಗ್ರಹಗಳೇ ಆಗಿವೆ. ವಿಮರ್ಶಕರು ಸಾದಿಯನ್ನು ಪರ್ಷಿಯಾದ ಕವಿಗಳಲ್ಲೆಲ್ಲಾ ಅತಿ ಹೆಸರುವಾಸಿಯಾದ ನೀತಿಯ ಕವಿತೆಯನ್ನು ಬರೆದ ಕವಿ—The greatest didactic and The most Popular Poet of Persia—ಎಂದು ಹೇಳಿದ್ದಾರೆ. ‘ ನೀತಿಯನು ಹೇಳುವಾಶಯವಿತ್ತು ನುಡಿದಾಯ್ತು, ನುಡಿಗಳನು ದೇವರಿಚ್ಛೆಗೆ ಬಿಟ್ಟು ನಡೆದಾಯ್ತು’ ಎಂದು ಕವಿಯೇ ಗುಲಿಸ್ತಾನ್ ಪುಸ್ತಕದ ಪೀಠಿಕೆಯಲ್ಲಿ ಹೇಳಿರುತ್ತಾನೆ.

ಆದರೆ ಸುಮ್ಮನೆ ನೀತಿಯನ್ನು ಹೇಳುವುದಕ್ಕೆ ಹೊರಟ ಕತೆ ಕವಿತೆಯಾಗುತ್ತದೆಯೇ ಎಂಬುದು ಒಂದು ದೊಡ್ಡ ವಾದ. ಈ ವಾದದ ದೃಷ್ಟಿಯಿಂದ ಸಾದಿಯಲ್ಲಿ ಕವಿತೆಯ ಧೋರಣೆ ಏನಿದೆ ಎಂದು ಸ್ವಲ್ಪ ನಿಂತು ನೋಡುವುದು ಅಪ್ರಕೃತವಾಗಲಾರದು.

ಕವಿತೆಗೆ ಆಧಾರವಾದದ್ದು ರಸ, ಒಂದು ಕರುಳಿನ ಕರೆ ಇರಬೇಕು. ಒಂಭತ್ತು ರಸಗಳನ್ನು ಹೇಳುತ್ತಾರೆ. ‘ ರಸಗಳೊಳ್ ಶೃಂಗಾರಮೇ ಬಲ್ಮೆ’ ಎಂಬವರೂ ಉಂಟು. ಈಗ ಬೇರೆ ರಸಗಳಿಗೆ ಪ್ರಾಮುಖ್ಯತೆಯನ್ನು ಕೊಡುವ ಕಾಲವೊದಗಿದೆ ಎಂಬ ವಾದವೂ ಉಂಟು. ಆದರೆ ಕರುಳಿಲ್ಲದಿದ್ದರೆ ಕವಿತೆ ಪೂರ್ಣವಾಗಲಾರದು. ಸಾದಿಯಲ್ಲಿ ಈ ಕರುಳು ಅನೇಕ ಸಂದರ್ಭಗಳಲ್ಲಿ ಕಾಣುತ್ತದೆ.

ಒಂದು ಕತೆಯಲ್ಲಿ ಹುಡುಗರನ್ನು ಶಿಕ್ಷೆಯಲ್ಲಿಡಬೇಕು ಎಂಬುದನ್ನು ಪ್ರತಿಪಾದಿಸುತ್ತಾನೆ. ಆದರೆ ಕಠಿಣನಾದ ಉಪಾಧ್ಯಾಯನನ್ನು

ನೋಡಿ ಬಾಲಕರನ್ನು ಹೀಗೆ ಹೊಡೆಯುತ್ತಾನಲ್ಲಾ ಎಂದು ಅವನ ಕರುಳು ಹೇಗೆ ಬಾಧಿಸುತ್ತದೆ ನೋಡಿ: 'ಪಶ್ಚಿಮದ ನಾಡಿನಲಿ ಮಠದುಪಾಧ್ಯಾಯನನು ನೋಡಿದ್ದೆ, ಹುಳಿಮೊಗದ, ಕಟುತರದ ನಾಲಗೆಯ ಒರಟು ನಿರ್ದಾಕ್ಷಿಣ್ಯ ಮೂರ್ತಿಯವಿವ; ಅವನ ಕಂಡೊಡೆ ಕೇಳಿ ಭಕ್ತಿವಂತರ ಭಕ್ತಿ ಹದದಪ್ಪಿ ಉರುಳುವುದು. ಓದಲು ಕುರಾನನವ ನಂಬಿದವರಾ ಹೃದಯಕಾಗುವುದು ಪೇಚಾಟ. ಎಳೆಯ ಬಾಲಕರ ಬಾಲಕಿಯರಾಮೇಲಿವನ ಆಡಳಿತ; ಒಂದು ಮಾತಿಗೆ ಒಂದು ಎಳೆನಗೆಗೆ ಅವಕಾಶವಿರದಿತ್ತು ಬಾಲರಿಗೆ. ಒಮ್ಮೆ ಈ ಬಾಲಕನ ಹಾಲ್ಗೆನ್ನೆಗೊಂದೇಟ ಹೊಡೆಯುವನು, ಒಮ್ಮೆ ಆ ಬಾಲಕಿಯ ಮೃದುಕಾಲ ಮುರಿಯುವನು. ತಂದೆ ತಾಯ್ಗಳು ನೋಡಿ ಓಡಿಸಿದರವನನ್ನು. ಪಾಠಶಾಲೆಗೆ ಬಂದನಿನ್ನೊಬ್ಬ ಬಹುಸಾಧು, ಮಾತನಾಡನು ಅವನು ಒತ್ತಾಯಕಲ್ಲದಲೆ, ಆರಿಗಾದರು ಅವನು ಮನಸನೋಯಿಸನೆಂದು. ಹುಡುಗರಿಗೆ ಮೊದಲಿನಾ ಭಯಹೋಯ್ತು. ನೋಡಿ ಅಧ್ಯಾಪಕನ ಸಾಧುವೃತ್ತಿಯನವರು ದುಷ್ಕರಾದರು ತಾವೆ. ಪಾಠಗಳ ಬಿಟ್ಟು ಬರಿಯಾಟದಲಿ ಕಾಲ ಕಳೆವರು ಅವರು, ಒಬ್ಬರೊಬ್ಬರ ತಲೆಗೆ ಹಲಗೆಯಲಿ ಕುಟ್ಟಿ ಹೊಡೆದಾಡುವರು.

ಸಡಿಲವಾಗಲು ನೋಡಿ ಪಾಠಶಾಲೆಯ ಕಟ್ಟು
ಬಾಲಕರು ಪೇಟೆಯಲಿ ಗೋಲಿಗಳನಾಡುವರು.

ಎರಡು ವಾರಗಳಾಯ್ತು ಹೀಗಿರುತ. ಪಾಠಶಾಲೆಯ ಮುಂದೆ ನಡೆದಿದ್ದೆ. ನೋಡುವೆನೆ ಮೊದಲನೆಯ ಆತನೇ ಬಂದಿದ್ದ. ನನಗೆ ಕೋಪವು ಬಂತು; ದೇವರಿಗೆ ಮೊರೆಯಿಟ್ಟೆ. ದೇವತೆಗಳಂದದಲಿ ಚೆಲುವರೀಬಾಲಕರು, ಕಲಿಸಲಿವರಿಗೆ ಮತ್ತೆ ಈ ದೊಡ್ಡ ದೆವ್ವವನು ತಂದಿಹರದೇಕೆಂದು ಕೇಳಿದೆನು. ನುಡಿದನೆನಗಾಗೊಬ್ಬ ಅನುಭವಿಕ.

ದೊರೆಯು ತನ್ನಯ ಕುವರನೊಬ್ಬನ ಪಾಠಶಾಲೆಗೆ ಕಳುಹಿದ,
ಅವನ ಕಂಠದೊಳೊಂದು ಬೆಳ್ಳಿಯ ತಗಡ ಮಂತ್ರಿಸಿ ಕಟ್ಟಿದ
ಚಿನ್ನದಕ್ಷರದಲ್ಲಿ ಬರೆದುದು ಏನದೆಂಬುದ ಕಂಡೆಯಾ
ಕಲಿಸುವಾತನ ಶಿಕ್ಷೆ ಮುಂದಕೆ ರಕ್ಷೆಯೆಂದಿದೆ ಬಲ್ಲೆಯಾ?

ಇನ್ನೊಂದು ಕತೆಯಲ್ಲಿ ಕವಿ ತನ್ನ ತಾಯಿಯ ನೆನಪು ಮಾಡಿಕೊಳ್ಳುತ್ತಾನೆ: 'ಗದರಿಸಿದೆ ಒಮ್ಮೆ ನಾನೆನ್ನ ತಾಯಿಯನು ಯುವಕತನದಾ ಗರ್ವದಲಿ, ನೊಂದುಕೊಂಡಳು ಆಕೆ, ಕುಳಿತೊಂದು ಮೂಲೆಯಲಿ ಕಣ್ಣೀರ ಸುರಿಸುತ್ತ ಹೇಳಿದಳು :

ಶಿಶುತನದ ದಿನಗಳನು ನೆನಸದಾದುದರಿಂದೆ ನೀನಿಂತು ಎನ್ನ ಗದರಿಸುತಿರುವೆ.

ಆನೆಯಂದದಿ ಬೆಳೆದು ಹುಲಿಯ ಬಲವಿರೆ ಮಗನ
ಕಂಡೆಂತು ಸೊಗಸಾಗಿ ಹೇಳಿದಳು ಆ ತಾಯಿ.
ಧೈರ್ಯವಿಲ್ಲದೆ ನೀನು ಎದೆಗಪ್ಪಿಕೊಳುತಿದ್ದೆ,
ಈಗ ಬೆಳೆದಿಹೆನೆಂದು ಸುಮ್ಮನೇ ಗರ್ಜಿಸುವೆ,
ಅಹುದಹುದು ನೀನೀಗ ಸಿಂಹದಂತಹ ಶೂರ
ಕೈಯಲಾಗದ ಮುದುಕಿ ನಿನ್ನ ಸಾಕಿದ ನಾನು.'

ಬೋಸ್ತಾನದಲ್ಲಿ ಒಂದು ಬರಗಾಲದ ವರ್ಣನೆ ಬರುತ್ತದೆ; ಹೀಗೆ :

ದಾಮಿಷ್ಕ ಪಟ್ಟಣದಿ ಬರಗಾಲ ಬಂದಿತ್ತು,
ಆ ಕಾಲ ಪ್ರೇಮಿಗಳ ಪ್ರೇಮವನೆ ಮರೆಸಿತ್ತು.
ತುಟಿ ಸವರೆ ನೀರ್ಕಾಣಲವಕಾಶವಿರದಿತ್ತು.
ಎಂದೆಂದುಮಿರುತಿದ್ದ ತೊರೆನೊರೆಯು ಒಣಗಿತ್ತು
ತಬ್ಬಲಿಯ ಕಣ್ಣೀರೆ ನೀರೆಂಬುದಾಗಿತ್ತು.
ಮನೆಯಿಂದ ಅಡಿಗೆಹೊಗೆ ಏನೇನು ಬರದಿತ್ತು,
ದೆಸೆಗೆಟ್ಟ ಹೆಂಗುಸರ ಬಿಸಿಯುಸಿರು ಬಂದಿತ್ತು.
ಗಿಡಬಳ್ಳಿ ಬರಿಮೈಯ ವೇಷವನು ತಳೆದಿತ್ತು
ಎದೆಗಾರರುಸಿರೆಲ್ಲ ಬಸವಳಿದು ಅಡಗಿತ್ತು,
ಗುಡ್ಡದಲಿ ಹಸುರಿಲ್ಲ ತೋಟದಲಿ ಚಿಗುರಿಲ್ಲ
ಹೊಲವ ತಿಂದವು ಮಿಡತೆ, ಮಿಡತೆ ತಿಂದರು ಜನರು.

ಬಗ್ದಾದ ಪಟ್ಟಣ ಟಾರ್ಟರರ ದಾಳಿಗೆ ತುತ್ತಾದುದನ್ನು ಕವಿ ತನ್ನ ಒಂದು ಪದ್ಯದಲ್ಲಿ ವರ್ಣಿಸಿದ್ದಾನೆ. 'ಅಮೀರರ ರಾಜ್ಯ ಹಾಳಾದುದನ್ನು

ನೋಡಿ ಮೇಘಲೋಕ ತನ್ನ ಕಣ್ಣೀರನ್ನು ರಕ್ತದ ಮಳೆಯಾಗಿ ಸುರಿಸಿದರೂ ಏನೂ ತಪ್ಪಿಲ್ಲ. ಮಹಮುದನೇ, ನ್ಯಾಯದಾ ದಿನದಲ್ಲಿ ಮಣ್ಣಿನಿಂದೆದ್ದು ಬರುವೆಯೇನು, ಈಗಲೇ ತಲೆಯೆತ್ತು, ನಿನ್ನ ಜನಗಳಿಗೆ ಆ ಕಡೆಯ ದಿನ ಒದಗಿದೆ ನೋಡು. ರಾಜರಾಜರು ಉರುಳಿದರು, ಮಹಮುದನ ಮಕ್ಕಳುಗಳಾ ರಕ್ತ ಚೆಲ್ಲಾಡಿತೀ ದಿನದಲ್ಲಿ, ಇದೆ ಇಲ್ಲಿ ಸುಲ್ತಾನರೆಂದವರು ಆಳಿದಾ ಎಡೆಯಲ್ಲಿ ' ಹೀಗೆ.

ನೋಯಿಸದಿರಿತರರನು ಬಲ್ಲನಿತು,
ಮುಳ್ಳುಗಳು ತಾವುಂಟು ಬಾಳ ಹಾದಿಯಲಿ
ಬಡವರ ಸಹಾಯಕ್ಕೆ ಕೈನೀಡು,
ನಿನಗಾದರಿರಬಹುದು ಕಷ್ಟ ಸಮಯಗಳು.

ಹೀಗೆ ಎಷ್ಟೋ ಮಾತು ಹೇಳಿದ್ದಾನೆ.

ನಗಬೇಕೊ ಅಳಬೇಕೋ ಗೊತ್ತಾಗುವುದಿಲ್ಲ, ನಕ್ಕುಬಿಡೋಣ, ಇಂತಹ ರಸವೊಂದನ್ನು ಕವಿತೆಯಲ್ಲಿ ತರುವುದಕ್ಕೆ ಎದೆಗಾರಿಕೆ ಬೇಕು. ತನ್ನ ಸನ್ನಿವೇಶವೇನಿತ್ತು, ಸಾದಿ ಅದನ್ನು ಹೇಗೆ ತಿರುಗಿಸಿದ್ದಾನೆ ಅದನ್ನು ಈ ಕತೆಯಲ್ಲಿ ನೋಡಬಹುದು. ' ಪರಂಗಿಗಳು ಆಗೆನ್ನ ಯಹುದಿಗಳ ಜೊತೆಯಲ್ಲಿ ತ್ರಿಬಲ್ಸ ನಗರದಲಿ ಕಂದಕವನಗೆಯುವಾ ಕೆಲಸಕ್ಕೆ ಹಾಕಿದರು ' ಎಂಬಲ್ಲಿಂದ ಮುಂದುವರಿದುದು. ಆಗ ' ಹಲಬದಾ ಶ್ರೀಮಂತನವನೊಬ್ಬ ಬಹುದಿನದ ಗುರುತಿನವ ಬಂದಲ್ಲಿ ಕೇಳಿದನು ಆವ ಪರಿಯಿದುಯೆಂದು. ಹೇಳಿದೆನು, ಆವ ಪರಿಯೆಂದಿದನು ವರ್ಣಿಸಲಿ

ಮನುಜರನೆ ಬಿಟ್ಟಾನು ಕಾಡಿಗೋಡುತಲಿದ್ದೆ
ದೇವನೇ ಆಧಾರವೆನಗೆಂದುಕೊಂಡಿದ್ದೆ.
ಮನುಜತನವಿಲ್ಲದಾ ಮಾನವರ ಸಹವಾಸ
ವಾಯ್ತೆಂದು ಏನನೊರೆಯಲಿ ನಾನು ದುರ್ದೆಶೆಯ,
ಗುರುತಿನವರೊಡನೆ ಬಂಧನದೊಳಿಹುದೇ ಲೇಸು
ಅರಿಯದರವೊಡನೇಕೆ ಉದ್ಯಾನದೋಡಾಟ ?

ಮರುಕವಾಯ್ತಾತನಿಗೆ. ಹತ್ತು ಹಣವನು ಕೊಟ್ಟು ತಪ್ಪಿಸಿದನಾ ಸೆರೆಯ.

ಮತ್ತೆನ್ನ ತನ್ನ ಊರಿಗೆ ಒಯ್ದು ನೂರು ಹಣಗಳ ಕೊಟ್ಟು ನನಗವನ ಮಗಳೊಡನೆ ಮದುವೆಯನು ಮಾಡಿದನು. ಇರಲಿರಲು ಕಿರುಕುಳಕೆ ಒಡೆಯಾಯ್ತು ಸಂಸಾರ, ಆ ಹೆಣ್ಣು ಬಹುಮಾತನಾಡುತ್ತಲಿರಲಾಗಿ.

ಶಾಂತನಾದಾತಂಗೆ ಬಯ್ವ ಹೆಂಡತಿಯಾಗೆ,
ನರಕವೀಲೋಕದೊಳು ಮತ್ತೆ ಬೇರೊಂದಿಲ್ಲ.
ದುಷ್ಟ ಗೆಳತಿಯ ಕೊಡದೆ ಕಾಪಾಡು ಎಲೆ ದೇವ
ಆ ನರಕದಾ ಹಿಂಸೆಯಿಂದೆಮ್ಮ ಕಾಪಾಡು.

ಬಯ್ಗಳಾ ಸುರಿಮಳೆಯ ಕರೆದೊಮ್ಮೆ ಮೂದಲಿಸಿದಳು ಹೆಣ್ಣು, ಹತ್ತು ಹಣವನು ಕೊಟ್ಟು ಆ ಪರಂಗಿಗಳ ಸೆರೆಯಿಂದೆನ್ನ ತಂದೆ ತಂದಾತನಲ್ಲವೆ ನೀನು ? ಹೇಳಿದೆನು, ಅಹುದಹುದು, ಅವನೆ ನಾನಾಗಿಹೆನು, ಹತ್ತು ಹಣ ಕೊಟ್ಟಾತ ಆ ಸೆರೆಯ ತಪ್ಪಿಸಿದ, ನೂರು ಹಣ ಕೊಟ್ಟಿಂತು ನಿನ್ನ ಕೈಗೊಪ್ಪಿಸಿದ.

ಕೇಳಿಹೆನು ಕುರಿಯೊಂದು ತೋಳನಿಗೆ ಸಿಕ್ಕಿತ್ತು
ದಾನಿಯಿಂದದೊಳೊಬ್ಬ ಬಿಡಿಸಿದನು ತಾನದನು.
ಅಂದಿನಾ ಇರುಳವನೆ, ಆ ಮನುಜ, ಆ ದಾನಿ,
ಕುರಿಮರಿಯ ಕುತ್ತಿಗೆಯ ತಿವಿದನು ಕಠಾರಿಯಲಿ,
ಕುರಿಯ ಭೂತವು ತೋರಿತವನಿಗೆ ಬಯ್ದು ಅವನಿಗೆ ಹೇಳಿತು
ತೋಳನಿಂದಲೆ ಬಿಡಿಸಿ ನೀನೇ ತೋಳನಾದೆಯಾ ಎಂದಿತು.'

ಇನ್ನಿತರ ಕಾವ್ಯಲಕ್ಷಣಗಳಿಗೆ ಈ ಮುಂದಿನ ಉದಾಹರಣೆಗಳನ್ನು ನೋಡಬಹುದು.

ದೇವನ ಕರುಣೆಯನ್ನು ವರ್ಣಿಸುತ್ತಾ ಕವಿ 'ಬೆಳಗಿನಾ ಸುಳಿಗಾಳಿ ಯೆಂಬ ತನ್ನ ಮಂತ್ರಿಗೆ ಹೇಳಿದನು ದೇವ ಪಚ್ಚೆಯಾ ಹಾಸಿಗೆಯ ಹರಡೆಂದು, ವಸಂತದ ಮುಂಗಾರ ಮುಗಿಲೆಂಬ ದಾದಿಗಪ್ಪಣೆಯ ಮಾಡಿದನು ಭೂಮಿಯೆಂಬಾ ತೊಟ್ಟಿಲಲಿ ಎಳೆಸಸಿಗಳೆಂಬಾ ಮಕ್ಕಳನು ತೂಗಿ ಸಲಹೆಂದು. ಗಿಡಗಳಿಗೆ ಹೊಸವರುಷದುಡುಗೊರೆಯೆಂದು ಹಸುರೆ

ಲೆಯು ತೊಡಿಸಿದನು. ಚಿಗುರುಗೊಂಬೆಗಳೆಂಬ ಮಕ್ಕಳಿಗೆ ನಗುವ ಹೂಗಳ ದಂಡೆಗಳಿಂದಲಂಕರಿಸಿದನು. ಹುಲ್ಲಿನೊಳಗಿನ ರಸವು ಅವನ ಶಕ್ತಿಯಿಂದಾಯ್ತು ಜೇನ ಮಧು. ಅವನ ಪಾಲನೆಯಿಂದ ಬೀಜಬೆಳೆಯಿತು ತಾನು ಖರ್ಜೂರ ಮರವಾಗಿ' ಎಂದು ಹೇಳುತ್ತಾನೆ.

ವ್ಯರ್ಥವಾದ ಜೀವನಕ್ಕಾಗಿ ಪಶ್ಚಾತ್ತಾಪಪಡುವುದನ್ನು 'ಕಲ್ಲು ಹೃದಯುವನು ಕಣ್ಣೀರ ವಜ್ರದಿಂದಲೆ ಕೊರೆದು' ಎಂದು ಒಂದುಕಡೆ ವರ್ಣಿಸಿದ್ದಾನೆ.

ಗುಲಾಬಿಯು ಮೇಲಿನ ಒಂದು ನೀರಿನ ಹನಿಯುನ್ನು ನೋಡಿ

ಆ ಗುಲಾಬಿಯು ಮೇಲೆ ಹನಿದಾ ಮುತ್ತು ಸೊಗಸುತಲಿರುವುದು।
ಮುಳಿದ ಪ್ರಿಯೆಯಾ ಮೊಗದ ಮೇಲಿನ ಬೆವರಿನಾ ಹನಿಯಂದದಿ ||

ಎನ್ನುತ್ತಾನೆ.

ಇದೊಂದು ತೋಟದ ವರ್ಣನೆ: 'ಏನು ಸೊಬಗಿನ ಬೀಡು, ಹೃದಯುವನು ಅರಳಿಸುವ ವೃಕ್ಷಗಳು ಮೇಲೆಲ್ಲ ಹೆಣೆದು ಹಬ್ಬಿಹವು, ನೆಲವೆಲ್ಲ ಸ್ಫಟಿಕಮಣಿಮಯವು, ವನವೆಲ್ಲ ಜಿಗಿಜಿಗಿಸುವಾ ಹಣ್ಣುಗಳ ತೋರಣವು.

ಅಲ್ಲಿ ಬದಿಯಲಿ ನಿಂತು ನೋಡಲು ರಂಗುರಂಗಿನ ಪುಷ್ಪವೂ
ಇಲ್ಲಿ ಗೊಂಚಲುಗೊಂಚಲಾಗಿಹ ಹಣ್ಣುಹಣ್ಣಿನ ಸುಗ್ಗಿಯೂ
ನೆಳಲು ಬೆಳಕಿನ ಆಟವಾಡುತ ಗಾಳಿ ಸುಳಿಯುತಲಿರುವುದು
ಚಿತ್ರಚಿತ್ರದ ರತ್ನಗಂಬಳಿ ಹಾಸಿ ತೋರುತಲಿರುವುದು.'

ತನ್ನ ಕವಿತೆಗೆ ಮೊದಲು ಮಂತ್ರಿಯ ಒಪ್ಪಿಗೆ ಬೇಕೆಂಬುದನ್ನು ಕವಿ ಆತನ 'ಒಪ್ಪಿಗೆಯೆಂಬ ಒಡವೆಯನ್ನು ಧರಿಸಿದಲ್ಲದೆ ತನ್ನ ಸೊಬಗಿನ ಕುಂದು ತಾನರಿತ ನನ್ನ ವಾಣಿಯೆಂಬಾ ಹಸೆಮಣೆಯ ಹೆಣ್ಣು ತಲೆಯೆತ್ತಿ, ಹಿಂದುಹಿಂದೆಯೆ ಕಿರುದನಿಯಲಿ ನಾಚಿ ಹಾಡುವುದನು ತಾ ಬಿಟ್ಟು, ಅರಳಿದಾ ಮೊಗದಿಂದೆ ಚೆಲುವಿನಾ ಸಂದಣಿಗೆ ಬರಲಂಜುತಿಹಳು' ಎಂದು ವರ್ಣಿಸುತ್ತಾನೆ.

ಈ ಹೋಲಿಕೆಯನ್ನು ನೋಡಿ

‘ ಸತ್ಯವಾಗಿರೆ ನೀನು ಆರ ಭೀತಿಯು ಏನು
ಮಲಿನ ವಸ್ತ್ರಕೆ ತಾನೆ ಅಗಸನೊಗೆಯುವ ಏಟು ? ’

ಆಷಾಢಭೂತಿತನ ಬೇಡವೆಂಬುವುದನ್ನು ಕವಿ ಹೀಗೆ ಹೇಳಿದ್ದಾನೆ:

‘ ಹೆದರುವೆನು ಆರಾಬಿ ಕಾಬಾದ ಹಾದಿಯಿದು |
ತಾನಲ್ಲ ಆ ಸ್ಥಳವ ನೀ ಮುಟ್ಟಲಾರೆ ||
ಈ ಹಾದಿ ಹೋಗುವುದು ತುರ್ಕಸ್ತಾನದ ಕಡೆಗೆ |
ನೀನೀಗ ದಾರಿಯನು ಬಿಟ್ಟು ಬಂದಿರುವೆ ’ ||

ಮರಳುಕಾಡಿನ ಪ್ರಯಾಣ ಕವಿಯ ಬಾಯಲ್ಲಿ ಹೀಗೆ ನುಡಿಸಿದೆ ಒಂದುಕಡೆ :

‘ ಎಂತು ನಡೆವನು ಕಾಲನಡಗೆಯ ದಾರಿಕಾರನು ಮುಂದಕೆ |
ಹೊರಲು ಆರದೆ ಹೊರೆಯ ನಿಲ್ಲಲು ಒಂಟೆಯೆಂಬುದೆ ಹಿಂದಕೆ ||
ಪುಷ್ಟಿಯಾಗಿಹ ಮನುಜ ನವೆಯಲು ಕಾಡ ಮಾರ್ಗದ ಬಳಲಿಗೆ |
ಮೊದಲೆ ಬಡವನು ಸೋಲದೆಂತವನಿರಲು ಬಲ್ಲನು ಬೇಗೆಗೆ ’ ||

ಕೇಳಲಾರದ ಹಾಡನ್ನು ಕೇಳಿ ಹೊರಟ ಉದ್ಗಾರ :

‘ ಏನು ಹಾಡಿನ ಬಿಗಿಯು ಅವನ ಆಲಾಪನೆಗೆ
ಜೀವನದ ತಂತಿಯೇ ಹರಿದು ತುಂಡಾಗುವುದು.
ಅವನ ಆ ದನಿಯೇನು, ಏನಿನಿದು ಆ ರಾಗ,
ತಾಯ್ತಂದೆ ಸತ್ತೆಡೆಯ ತಬ್ಬಲಿಗಳತ್ತಂತೆ. ’

‘ ಮುದ್ದುಮೊಗ ಚೆಂದುಟಿಯು ಇಂಪಾದ ಕೊರಳಿಂದೆ
ಬರಲೊಂದು ಹಾಡದರ ಮಾಧುರ್ಯ ಬೇರಿಹುದು.
ಓಪಾಕ, ಇಸ್ಪಹಾನಿ ಜ್ಯಾಜ ರೀತಿಗಳು
ಸಂಗೀತಶಾಸ್ತ್ರವೆನೆ ಸೇರಿರಲು ಏನಂತೆ,
ಮನಕೆ ತಟ್ಟುತಲಿಹುದು ಸರಸ ಬೇಸರವಾಗಿ
ಈ ರೀತಿ ಅಣ್ಣಗಳು ಹಾಡಿದೊಡೆ ಕೇಳಯ್ಯ. ’

ಗುಲಿಸ್ತಾನದಲ್ಲಿನ ಎರಡು ಕತೆಗಳು ಸಾದಿಯ ಮನಸ್ಸು ಹೇಗೆ ಹಾಡಿನ ಕಡೆಗೆ ಒಲಿದಿತ್ತು ಎಂಬುದನ್ನು ತೋರಿಸುತ್ತವೆ.

ಮೊದಲನೇ ಕತೆ :

'ಒಮ್ಮೆ ನಾವಿರುಳೆಲ್ಲ ನಡೆನಡೆದು ದಾರಿಗರು ಮುಂಜಾನೆ ಮರಳು ಕಾಡಿನ ಅರುಗ ಸೇರಿ ತಂಗಿದೆವಲ್ಲಿ. ಸಂಗಡಿಗನೊಬ್ಬನಾ ಬೆಳಕು ಹರಿವುದ ರೊಳಗೆ ಕೂಗಿಕೊಂಡೆದ್ದು ಮರಳುಕಾಡಿನ ಒಳಗೆ ತಿರುತಿರುಗಿ ಬಹು ವೇಳೆ ಬಂದನೇನಚ್ಚರಿಯೊ. ಮರುದಿನದೊಳವನನ್ನು ಕೇಳಿದೆನು ಆವ ಪರಿ ಯಿದುಯೆಂದು. ಹೇಳಿದನು ಹಾಡುವಾ ಹಕ್ಕಿಗಳು ವನಗಳಲಿ ಸೇರಿದ್ದು ವೇನೆಂಬೆ, ಬೆಟ್ಟದಲಿ ಬಂದಿದ್ದುವಾ ನುಡಿವ ಹಕ್ಕಿಗಳು, ನೀರಿನಲಿ ಕಂಡೆ ದನಿಗೆಯ್ವ ಮಂಡೂಕಗಳ, ಕಾಡಿನಲಿ ಗರ್ಜಿಸುವ ಮೃಗಗಳನು. ಕಂಡುಕಂಡಿವನೆಲ್ಲ ನುಡಿದುಕೊಂಡೆನು ನಾನೆ ಇಂತಿವುಗಳೆಲ್ಲವೂ ದೇವನೊಲುಮೆಯ ಹೊಗಳಿ ಹಾಡುತ್ತಲಿಹವೇನು, ಮರವೆಯಾ ನಿದ್ರೆಯಲಿ ನಾನು ಮಲಗಿಹುದೇನು ?

ಬೆಳಕು ಹರಿಯುದ ಮುನ್ನ ಹಕ್ಕಿ ಹಾಡುತಲಿತ್ತು
ಸೂರೆಗೊಂಡಿತು ಎನ್ನ ತನುಮನವನೆಲ್ಲವನು.
ಎನ್ನ ರಾಗದ ದನಿಗೆ ಬೆಚ್ಚಿದನೊ ಸ್ನೇಹಿತನು
ಹಕ್ಕಿಹಾಡಿಗೆ ಇಂತು ಸೋಲುವರೆ ಕೇಳಿದನು.
ನುಡಿದೆನುತ್ತರವಯ್ಯ ಮಾನವನ ಕೃತಿಯಲ್ಲ
ಮರೆತಿಹುದು ದೇವನನು ಹಾಡುತಿರೆ ಹಕ್ಕಿಗಳು.'

ಎರಡನೆಯ ಕತೆ :

'ಹಿಜ್ಯಾಜ ಯಾತ್ರೆಯಲಿ ನಾನೊಮ್ಮೆ ಯುವಕರೊಂದಿಗೆ ಸೇರಿ ನಡೆದಿದ್ದೆ. ಸ್ನೇಹದೊಳಗಿರುತಿದ್ದೆವದರಿಂದೆ ನಾವೆಲ್ಲವೊಂದಾಗಿ ಆಗಾಗ ಭಕ್ತಿಯಾ ಹಾಡುಗಳ ಹಾಡುತ್ತ ಸವೆಸುತ್ತಿದ್ದೆವು ಬಳಸುಹಾದಿಯನು. ಎಮ್ಮೊಂದಿಗಿರುತಿದ್ದನಾ ಬಿದನು ತಾನೊಬ್ಬ, ಹಳಿಯುತಿದ್ದನು ಬಿಡದೆ ದರ್ವೇಷರಾದವರ ನಡೆನುಡಿಯ ರೀತಿಗಳ. ಇಂತಿರಲು ಹೂಲಾಲ ಅರಬಿಯರ ವನದ ಬಳಿಗೈದಿದೆವು. ಅಲ್ಲಿನಾ ಅರಬ ಹುಡುಗನು ಒಬ್ಬ

ಸೊಗಸಿನ ಹಾಡೊಂದ ಹೇಳಿಕೊಳ್ಳುತಲಿದ್ದ. ಮಧುರಗಾನದ ಸವಿಗೆ ಗಗನದಲಿ ಹಾರುವಾ ಹಕ್ಕಿಗಳು ಕೆಳಗಿಳಿದು ಕಿವಿದೆರೆದು ಕುಳಿತು ಕೊಳ್ಳಲು ಬೇಕು. ಆ ಬಿದನ ಒಂಟೆ ಕುಣಿದಾಡಿತೀ ಹಾಡ ಕೇಳಿದ ಒಡನೆ. ಕೆಡವಿ ಅವನನು ಸ್ವೇಚ್ಛೆಯಿಂದೋಡಿಯೇ ಹೋಯ್ತು. ಕೇಳಿದೆನು ಆಚಾರ್ಯ, ಆ ಹಾಡು ಮೃಗವನೇ ಕುಣಿಸಿ ನಲಿದಾಡಿಸಿತು, ನಿನಗೇಕೆ ಕಾಣಲಿಲ್ಲದರ ಸವಿ!

ಹಕ್ಕಿ ಎನ್ನಯ ಕಿವಿಯಲೇನನು ಉಸಿರಿ ಹೇಳಿತು ಕಂಡೆಯಾ
ಪ್ರೇಮವೆಂಬುದ ಕಾಣೆಯಾದೊಡೆ ಮನುಜನಲ್ಲವು ಎಂದಿತು.
ಅರಬ ಹೇಳಿದ ಹಾಡ ಸೊಗಸಿಗೆ ಒಂಟೆಯೇ ಕುಣಿದಾಡಿತು
ಸೊಗಸನರಿಯದೆ ಹೇಳು ಮನುಜನೆ ಮೃಗಕೆ ನೀ ಕಡೆಯಾದೆಯಾ?
ಒಂಟೆ ಪರವಶವಾಗಿ ಹರುಷದೊಳುಬ್ಬಿಹೋಯಿತು ಎನ್ನಲು,
ಕಲ್ಲುಮನುಜನ ಮನುಜನೆಂಬೆನೆ ಕತ್ತೆಯೆನ್ನುತ ಕರೆವೆನು.
ಎಲ್ಲಿ ನೋಡಲು ದೇವನಾ ಸ್ತುತಿ ಹೊಮ್ಮಿ ಹೊರಡುತಲಿರುವುದು
ಕಿವಿಯುದಾವನಿಗುಂಟು ಅವನಿಗೆ ಉಂಟು ಹೃದಯದ ಭಕ್ತಿಯೂ.
ಹಕ್ಕಿಯೊಂದೇ ಮೆಚ್ಚಿ ಹಾಡುವುದಲ್ಲ ಹೂವಿನ ಸೊಬಗನು,
ಪೊದೆಯ ಮೇಲಿನ ಮುಳ್ಳು ಎಲ್ಲಾ ಸ್ತುತಿಯ ಹಾಡುತಲಿರುವುದು.'

ಇನ್ನೊಂದು ಕಡೆ ಸಂಗೀತದ ಈ ವರ್ಣನೆ ಬರುತ್ತದೆ.

ಸರಸದಾ ಸವಿಯುಂಡು ಸುಳಿಯುತಿಹ ಪ್ರೇಮಿಗಳ
ಸೆಳೆದೊಲಿಸಿ ಸುಳಿಯುವುದು ಸರಸತರ ಸಂಗೀತ,
ಚೆಲುವೇಕೆ, ಅದು ನೋಡೆ ಬರಿಯ ದೇಹದ ನ್ಯಾಯ,
ಎಬ್ಬಿಸುವುದಾತ್ಮವನು ಸವಿನುಡಿಯ ಸಂಗೀತ.

ಹೇಳುವುದನ್ನು ಸ್ವಲ್ಪದರಲ್ಲಿ ಹೇಳುವುದು ಸಾದಿಯ ಪದ್ಧತಿ ಎಂದು ಕಾಣುತ್ತದೆ. ಸ್ವಲ್ಪ ಉದ್ದವಾಗಿ ಹೇಳುವುದಕ್ಕೆಹೊರಟಾಗ ಅದಕ್ಕೆ ತಕ್ಕ ಕವಿತಾಧೋರಣೆ ಬರುತ್ತದೆ. ಬಡವ ಶ್ರೀಮಂತರ ವಿಚಾರವನ್ನು ಒಂದು ಕಡೆ ಸ್ವಲ್ಪ ಲಂಬಿಸಿ ರಸವತ್ತಾಗಿ ಹೇಳಿದ್ದಾನೆ. ಆ ಭಾಗದ ಕೆಲ ಕೆಲವು ಆಯ್ಕೆಗಳನ್ನು ನೋಡಬಹುದು. ಶ್ರೀಮಂತರು ಅವರ ಪರವಾಗಿ

ಮಾತನಾಡುವವನ ದೃಷ್ಟಿಯಿಂದ ‘ಬಡವರಿಗೆ ಭಂಡಾರ, ಸಾಧುಗಳಿ ಗುಗ್ರಾಣ, ಯಾತ್ರಿಕರ ಗುರಿಯು ಗುಡಿ, ಪಯಣಿಗರ ಬೀಡಾರ.’ ಪ್ರತಿವಾದಿ ಗುಣವರ್ಣನೆಯನ್ನು ಕೇಳಿ ಸಿಟ್ಟಿಗೆದ್ದನಂತೆ ‘ಶಾಂತಿಯನು ಹಿಡಿದವನ ಆಕ್ಕೈಯಿ ಒಮ್ಮೆಯೇ ಸಡಿಲಿಸಿತು, ಕೋಪದಾ ನುಡಿಯೆಂಬ ಆ ಕುದುರೆ ಹೆಮ್ಮೆಯಾ ಬಯಲಿನಲಿ ಹುಚ್ಚಾಗಿ ಓಡಿತದು. ಅವನ ನಾಲಗೆಯೆಂಬ ಶಕ್ತಿಯನು ಸೆಳೆದೆಳೆದು ಝಳಪಿಸಿದನೆನ್ನೆದುರು.’ ಅವನು ಕೇಳಿದ್ದಂತೆ ಶ್ರೀಮಂತರು ‘ಹೇಳಿಯೇ ಹೇಳುವರು ಮನೆಯಲ್ಲಿ ಆರಿಲ್ಲ, ಮನೆಯಲ್ಲಿ ಆರಿಲ್ಲ, ಸತ್ಯವಾಗಿಹುದು ಅವರ ಆ ಹೇಳಿಕೆಯು

ನ್ಯಾಯಮತಿ ತಿಳಿವೊಂದು ಯಜಮಾನಗಿಲ್ಲದಿರೆ
ಆಳು ಹೇಳಿದ ನಿಜವ ಮನೆಯೊಳಗೆ ಆರಿಲ್ಲ.’

ಇದು ಕಟ್ಟಕಡೆಗುಂಟಾದ ಜಗಳದ ವರ್ಣನೆ: ‘ಮಾತಿನಾ ಜಗಳವದು ನಡೆದಿತ್ತು. ಇಂತು ಆ ಚದುರಂಗದಾಟದಲಿ ಅವನು ಒಡ್ಡಿದ ಪೇದೆಗಳಿಗೆಲ್ಲ ಅಡ್ಡಲಾಗಿಡುತಿದ್ದೆ ನನ್ನ ಕಡೆ ಪೇದೆಗಳ. ನನ್ನ ದೊರೆಯನು ಒಮ್ಮೆ ಹಿಡಿದು ನಿಲ್ಲಿಸಲವನು ರಾಣಿಯಿಂ ಸೆರೆಯ ಬಿಡಿಸುತಲಿದ್ದೆ. ಅವನ ಮಾತಿನ ನಾಣ್ಯ ಎಲ್ಲ ಮುಗಿಯುತ ಬಂತು. ತರ್ಕದಾ ಅಂಬುಗಳು ಹೂಡಿಯಾದುವು ಎಲ್ಲ.

ಮಾತಿನಾ ಮಲ್ಲನಿಗೆ ಹೆದರಿ ಹಿಂದಾಗದಿರು
ಉತ್ಪ್ರೇಕ್ಷೆ ಹೊರತಾಗಿ ಅವನಿಗೇನುಳಿದಿಲ್ಲ.
ಶಾಸ್ತ್ರಗಳು ನ್ಯಾಯ ಕಟ್ಟಳೆಯೆಂಬ ಮಾತುಗಳು
ನಿನ್ನ ಕಡೆಗಿರುತಿರಲು ನಿಲ್ಲಿಸವುಗಳ ಮುಂದೆ.
ಶಸ್ತ್ರಗಳು ಇಹವೆಂದು ಹೊರಗೆ ತೋರುವನವನು.
ಅವನ ಕೋಟೆಯ ಒಳಗೆ ಸೈನಿಕರು ತಾವಿಲ್ಲ.

ಕಡೆಗವನ ತರ್ಕದಾ ಯುಕ್ತಿಗಳು ಮುಗಿದುಹೋಗಿರಲಾಗಿ ಸೋಲನೊಪ್ಪುವ ಸಮಯ ಬಂದಾಯ್ತು. ಒರಟುತನದಾ ಕೂಗು ಮೊದಲು ಮಾಡಿದನವನು ತನ್ನ ಮಗ ಅಬ್ರಾಮನೊಡನಾಡಿ ತರ್ಕದಲಿ ಸೋತಿರಲು ಆ ಸುರನು ಮುಷ್ಟಿಯುದ್ಧವನೊಡನೆ ಪ್ರಾರಂಭಿಸಿದ ತೆರದಿ. ಎನ್ನ

ಬಯ್ದನು ಅವನು, ಮತ್ತೆ ಬಯ್ದೆನು ನಾನು. ಎರಗಿದನು ಅವನೆನ್ನ ಕುತ್ತಿಗೆಗೆ, ಹಾರಿದೆನು ನಾನವನ ಗಡ್ಡಕ್ಕೆ

ಮೇಲೆ ಬಿದ್ದನು ಅವನು ಮೇಲೆ ಬಿದ್ದೆನು ನಾನು
ಸುತ್ತುಮುತ್ತಿದ ಮಂದಿ ಆಟವನು ನೋಡಿದರು.
ಏನು ಕಾರಣವೆಂದು ಕೇಳಿ ತಿಳಿದರು ಅವರು
ಏನಿದಚ್ಚರಿಯಾಯ್ತೊ ತಿಳಿದು ನಕ್ಕರು ಅವರು.'

ಜಗಳ ಕಾಜಿಯ ಕಡೆಗೆ ಹೋಯಿತು. ಕಾಜಿ ಒಂದು ದೊಡ್ಡ ಉಪನ್ಯಾಸ ಹೇಳಿದನಂತೆ. 'ಇಂತಹ ಮುಂದರಿದಿತ್ತು ಕಾಜಿಯಾ ವಾಗ್ಝರಿಯು. ಅವನ ಆ ನುಡಿಗುದುರೆ ನಮ್ಮ ಊಹೆಗೆ ಮೀರಿ ವೇಗವನು ತಳೆದಿತ್ತು.' ಈ ಉಪನ್ಯಾಸವನ್ನು ಕೇಳಿ ಜಗಳ ಹೂಡಿದವರು ಏನು ಮಾಡಿದರೆಂದರೆ 'ಅವನ ತೀರ್ಮಾನಕ್ಕೆ ಒಪ್ಪಿದೆವು. ಜಗಳವನು ಮಾಡಿದಾ ತಪ್ಪಿತಕೆ ಕ್ಷಮೆಯ ಬೇಡಿದೆವಾಗ. ಶಾಂತಿಸಂಧಾನಕ್ಕೆ ತಿರುಗಿದೆವು. ಒಬ್ಬರೊಬ್ಬರ ಸಿರವ ಒಬ್ಬರೊಬ್ಬರ ಪಾದದೆಡೆಯಿಟ್ಟು ಒಬ್ಬರೊಬ್ಬರನಪ್ಪಿ, ಅಡಗಿಸುತ ತುಂಟತನಗಳನೆಲ್ಲ ಒಯ್ದು ಬಿಟ್ಟೆವು ಯುದ್ಧ ಪ್ರಕರಣವ ಶಾಂತಿಯಾವರಣಕ್ಕೆ. ಮಂಗಳವ ಹಾಡಿದೆವು ಈ ಎರಡು ನುಡಿಗಳಲಿ

ಎಲೆ ಬಡವ ಸುಖದುಃಖ ತಿರುಗಣೆಗೆ ಮರುಗದಿರು
ಸತ್ತರೂ ಕತ್ತಲೆಗೆ ಒಯ್ಯುವುದು ಈ ಗೋಳು.
ಎಲೆ ಧನಿಕ ಕೊಡುಗೈಯ ತೋರಯ್ಯ ಇರುವಂದು,
ಇಹಪರಗಳೆರಡರಲಿ ಸುಖವುಂಟು ಇದರಿಂದ.

ಹೀಗೆ ಕವಿತ್ವದ ಮಾತು ಬಂದಿರುವಾಗಲೇ 'ಸೂಫಿ ಭಾವನೆ' ಅಥವಾ 'ಮಾರ್ಮಿಕವಾದ ಕವಿತಾಸರಣಿ'ಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ಉಮರ್ ಖಯಾಮ್, ಹಾಫಿಸ್ ಕವಿಗಳನ್ನು ಒಂದು ಪಂಥದವರು ಕೇವಲ ಪ್ರಾಪಂಚಿಕರ ಗುಂಪಿಗೆ ಸೇರಿಸಲು ಪ್ರಯತ್ನಪಟ್ಟಿರುವುದೂ, ಒಂದಿ ಪಂಥದವರು ಸೂಫಿ ಭಕ್ತರ ಗುಂಪಿಗೆ ಸೇರಿಸಲು ಪ್ರಯತ್ನಪಟ್ಟಿರುವುದೂ ಕಂಡುಬಂದಿದೆ. ಸಾದಿಯೂ ಒಂದು

ದೃಷ್ಟಿಯಿಂದ ಸೂಫಿಗಳ ಗುಂಪಿಗೆ ಸೇರತಕ್ಕವನೇ. ಸೂಫಿ ಭಾವನೆಗಳಿಂದ ಹುಟ್ಟಿರುವ ಒಣ ಚರ್ಚೆ ನಮ್ಮನ್ನು ಬೇಸರಗೊಳಿಸಬಹುದು, ಆದರೆ ಅವುಗಳಿಂದ ಕವಿತೆಗೆ ಸ್ಫೂರ್ತಿ ದೊರೆತಿರುವ ಭಾಗದಲ್ಲಿ ಸಹಾನುಭೂತಿಯುಂಟಾಗುತ್ತದೆ. ಸಾದಿ ತತ್ವಜ್ಞನಾಗಿ ಒಂದು ಕತೆ ಹೀಗೆ ಹೇಳುತ್ತಾನೆ: 'ಹಿರಿಯನನು ಕೇಳಿದೆನು ಸೂಫಿಗಳ ಗುಣವದೆಂತಿಹುದೆಂದು. ಅವರೊಳಗೆ ಅತಿಹೀನನಾದವನು ಸಹ ತನ್ನ ಕೊರತೆಗಳ ಗಮನಿಸದೆ ಗೆಳೆಯರನುಕೂಲವನು ಮೊದಲು ನೋಡುವನೆಂದು ಹೇಳಿದನು. ತತ್ವಜ್ಞರಾಡಿಹರು ತನಗೆ ಕಾನಾಗಿರುವ ಸೋದರನೆ ಇರಲೇನು ಸೋದರನು ಅವನಲ್ಲ, ಬಂಧುವೂ ಅವನಲ್ಲ ಇಂತೆಂದು.

ಹಾದಿಯಲಿ ಒಡನಿದ್ದು ಓಡಿಹೋಗುವನವನು,
ದಾರಿಪಯಣದ ಗೆಳೆಯನೆನಲಾಗದವನನ್ನು
ತನ್ನ ಮತ ಬೇರಾಗೆ ಬಂಧುತ್ವ ಹೊಂದದದು,
ಇರಲು ಬಂಧುತ್ವವನು ಬಿಡುವುದೇ ಲೇಸು.

ನುಡಿದನಿದಕೊಬ್ಬಾತ, ತಪ್ಪಿಹುದಭಿಪ್ರಾಯ, ಹೇಳಿದೆ ಕುರಾನಿನಲಿ ಭಿನ್ನಮತವಿರಲೇನು ಬಂಧುಗಳ ಬಿಡುವುದದು ದೇವಸಮ್ಮತವಲ್ಲವದುಯೆಂದು. ಹಾಗಲ್ಲ ಸೂತ್ರವದು ಬೇರೆಯಾಗಿಹುದೆಂದು ತೋರಿದೆನು

ಒಬ್ಬಾತ ಹೊರಗಿನವ ದೇವನಿಗೆ ಬೇಕಾದ
ಮನುಜನಾಗಿರಲವನು ಅವನಿಗೋಸುಗ ಕೇಳು
ಸಾವಿರಕೆ ಮೀರಿದಾ ಬಂಧುಗಳ ಬಿಡಬಹುದು
ತಾವೆಲ್ಲ ದೂರವಾಗಿರಲವರು ದೇವನಿಗೆ.'

ವಿಮರ್ಶಕ ಅಥವಾ ಹಾಸ್ಯಗಾರನಾದ ಸಾದಿ ಹೇಳುತ್ತಾನೆ: 'ಶಾಮದಾಷೇಕನೊಬ್ಬನ ಕುರಿತು ಕೇಳಿದರು ಸೂಫಿಗಳ ನಿಜವೇನು ಹೇಳೆಂದು. ಹೇಳಿದನು ಮೊದಲವರ ದೇಹಗಳ ಸಂದಣಿಯು ಚದುರಿತ್ತು, ಮನವೆಲ್ಲ ಕೂಡಿತ್ತು. ಈಗಿಹುದು ದೇಹಗಳಲಂಕಾರ, ಒಳಗೆಲ್ಲ ಅವಿಚಾರ.

ಕ್ಷಣಕೊಂದು ಸ್ಥಳವಾಗಿ ಹುಚ್ಚು ಮನ ತಿರುಗುತಿದೆ
ಒಂದೆಡೆಯ ಶುದ್ಧಿಯನು ಕಾಣುವುದು ಈಗೆಂತು ?
ಸುತ್ತಲೂ ಇರಬಹುದು ಧನಕನಕ ವ್ಯಾಪಾರ,
ದೇವನಲಿ ನೆಲೆಯಾಗೆ ಮನವದುವೆ ಸಾಧುತನ.'

ಇನ್ನು ಕವಿ ಸಾದಿಯನ್ನು ಕೇಳೋಣ. ದೇವನ ಸ್ತುತಿಗೈಯುತ್ತ ಈ ವರ್ಣನೆ ತಾನಾಗಿ ಮುಂದುವರಿಯುತ್ತದೆ:

'ಪ್ರೇಮಿಗಳು ಪ್ರೇಮದೊಳಗಳಿದುಹೋದರು ಎಲ್ಲ
ಅಳಿದವರ ದನಿಗಳವು ಎಮಗಾಗಿ ಉಳಿದಿಲ್ಲ.

ಯೋಗನಿಪ್ರಿಯೊಳೊಬ್ಬ ಧ್ಯಾನಸಾಗರದಲ್ಲಿ ಮುಳುಗಿದ್ದ. ಎಚ್ಚತ್ತ ವೇಳೆ ಮಿತ್ರನೊಬ್ಬನು ಬಂದು ಕೇಳಿದನು, ಈ ಉದ್ಯಾನದೊಳಗಿದ್ದೆಯೇ ಅಲ್ಲಿಂದ ನಮಗೇನ ತಂದಿರುವೆ ನೀನೆಂದು. ಹೇಳಿದನು, ಧ್ಯಾನಿಸಿದೆ ಹೂವಿನಾ ಗಿಡದೆಡೆಗೆ ಹೋದಲ್ಲಿ ಸೆರಗ ತುಂಬಿಯೆ ನಾನು ಹೂಗಳನು ತರುವೆ ಮಿತ್ರರಿಗೆಂದು. ಗಿಡದ ಬಳಿಗೈದಿರಲು ಹೂವಿನಾ ಪರಿಮಳದಿ ಮನ ಸಿಲುಕಿ ಸೆರಗು ಬಿಟ್ಟುದು ಕೈಯು.

ಎಲೆ ಹಕ್ಕಿ ಪ್ರೇಮವನು ಕಲಿ ಪತಂಗವ ನೋಡಿ
ಜೀವನವ ತೆತ್ತಿತದು ಅದರ ದನಿ ಬರಲಿಲ್ಲ.'

ಬಾಲ್ಯಕದ ಪ್ರಾರ್ಥನಾಲಯದಲ್ಲಿ ಒಮ್ಮೆ ತಾನು ಆಡಿದ ಮಾತನ್ನು ವರ್ಣಿಸುತ್ತಾ ಕವಿ ಹೇಳಿದ್ದಾನೆ, 'ವರ್ಣನೆಯು ಮುಂದುವರಿಸುತಲಿರಲು ತಾನಾಗಿ ಹೊರಟಿತೀ ನುಡಿಯಾಗ:

ನನಗೆ ನಾನೇ ಹೊರಗು ಇನ್ನು ಹತ್ತಿರದಾಕೆ
ಎನಗೆ ಪ್ರೀತಿಯೊಳೆಂಬ ಪ್ರೇಯಸಿಯು ಇರುತಿರಲು
ಕಾಣದೆಯೆ ಹೋದೆನಲ್ಲಾ ಎನಿದಚ್ಚರಿಯು,
ಮರೆತೆನೇತಕೆ ಇಂತು ಬಳಿಸಂದ ಪ್ರೇಮವನು!
ಎನ್ನ ಈ ಮರುಳುತನವಾರಿಗೊರೆಯಲಿ ನಾನು,
ಬಳಿಯೊಳೇ ಇಹಳವಳ ಕಂಡರಿಯೆ ನಾನೆಂದು.

ಈ ನುಡಿಯು ಜೊಂಪಿನಲಿ ತೇಲಿತ್ತು ಎನ್ನ ಮನ, ಎನ್ನ ಕೈಯೊಳ್ ಇತ್ತು ಪಾನಪಾತ್ರೆಯು ತಾನು.'

ಇನ್ನೊಂದು ಕತೆಯುಲ್ಲಿ ಕವಿ ಹೀಗೆ ಹೇಳಿದ್ದಾನೆ:

ಯುವಕತನದೊಳಗಂದು ಮನಕೆ ನೆಟ್ಟಿಹುದು ನೋಡಿದ ನೋಟ. ಬೇಸಗೆಯು ದಿನವಾಗ, ತಾಪಕ್ಕೆ ತುಟಿ-ಬಾಯಿ ಒಣಗುತ್ತಲಿರುತಿತ್ತು. ಮರಳ ಕಾಡಿನ ಗಾಳಿ ಎಲುವುಗಳ ಕರಗಿಸುತಲಿರುತಿತ್ತು. ಮಧ್ಯಾಹ್ನ ತಾಪವನು ಸಹಿಸಲಾರದೆ ನಾನು ಒಂದು ಗೋಡೆಯು ಬಳಿಯು ಸಾರಿದೆನು. ಪುಣ್ಯಾತ್ಮರಾರಾದರೂ ಗುಟುಕು ನೀರನು ಕೊಟ್ಟು ತಣಿಸುವರು ಬಾಯಾರಿಕೆಯುನೆಂದು ನಂಬಿದೆನು. ಆಗಲೇ ಅಲ್ಲೊಂದು ಮನೆಮುಖದ ಮಂಟಪದಿ ಚೆಲುವೆಯೊಬ್ಬಳ ಕಂಡೆ, ಆ ಚೆಲುವ ಬಣ್ಣಿಸಲು ನುಡಿಯಿಲ್ಲ; ಕತ್ತಲಲಿ ಹಗಲ ಬೆಳಕಾದಂತೆ, ಪ್ರಳಯದಲಿ ನಿತ್ಯತ್ವದಾ ಬುಗ್ಗೆ ಯುಕ್ಕಿದಾ ತೆರನಂತೆ, ಅವಳ ಕೈಲೊಂದು ನೀರಿನ ಪಾತ್ರೆ, ಅದರೊಳಗೆ ತಣ್ಣೀರು, ಸಕ್ಕರೆಯುನೂ ಮಧುವನೂ ಸೇರಿಸಿದಳದಕೆ, ಅತ್ತರನು ಬೆರಸಿದಳೊ, ಅವಳ ಮೊಗದಾ ಚೆಲುವೆ ನೀರಿನಲಿ ಸೇರಿ ಪರಿಮಳವಾಯ್ತೊ! ಇರಲಿ ಆ ಮೃದುಕೈಯಿ ಎನಗಿತ್ತ ನೀರಿಂದೆ ನವಜೀವವಂಕುರಿಸಿತೆನ್ನಲ್ಲಿ.

ದಿನದಿನವು ಆ ಚೆಲುವು ಕಾಣಿಸುವುದಾವನಿಗೆ
ಲವಲವಿಕೆ ಸಂತೋಷ ಸಮನಿಸುವುದಚ್ಚರಿಯೆ?
ಮಧುವ ಮಾತ್ರವೆ ಕುಡಿದು ಮತ್ತೇರಿದಾತನಿಗೆ
ಅರೆರಾತ್ರಿ ತಲೆತಿರುಗಿ ಎಚ್ಚರಿರುವುದೆ ಲಭ್ಯ;
ದೇವನಾ ಮಧುಪಾತ್ರದಲಿ ಹುಚ್ಚನಾದಂದು
ನ್ಯಾಯದಾ ವೇಳೆಯೋ ದಿನ ಬೆಳಗಿ ಬಂದಂತೆ.

ಈ ಕವಿತೆಯು ಹುಚ್ಚನ್ನು ಎತ್ತಿ ಹೇಳುವ ಸಂದರ್ಭದಲ್ಲಿ ಲೈಲ ಮಜ್ನೂನರ ಕತೆ ಬಹಳ ಒಪ್ಪವಾಗಿ ಹೊಂದಿಕೊಳ್ಳುತ್ತದೆ. ಸಾದಿ ಮುಖ್ಯವಾದ ಅಂಶವನ್ನು ಹೇಗೆ ಸಂಗ್ರಹ ಮಾಡಿ ಹೇಳುತ್ತಾನೆ ಎಂಬುದೂ ಇದರಿಂದ ವಿಶದಪಡುತ್ತದೆ. ಕತೆ: 'ಅರೆಬಿಯುದ ದೊರೆಗೊಂದು ದಿನ ಲೈಲ ಮಜ್ನೂನರ ಸಂಗತಿಯು ಹೇಳಿದರು, ಹುಚ್ಚನಾಗಿ

ಗಿಹನು ಮಜ್ನೂನೆಂದು, ವಿದ್ಯೆ ಬುದ್ಧಿಗಳೆಲ್ಲ ಮರೆಯಾಗಿ, ಉನ್ಮಾದದಲಿ ಮರಳುಕಾಡಿನೊಳಗಲೆಯುತಿಹನವನೆಂದು. ಅರಸನಪ್ಪಣೆಯಾಯ್ತು, ಸನ್ನಿಧಿಗೆ ಹಿಡಿತಂದರವನನ್ನು. ದೊರೆಯುವನ ಕೇಳಿದನು, ಮನುಜನ ಸ್ವಭಾವದಲಿ ನಿನಗೆ ಬೇಸರವೇನು, ಮೃಗಗಳನು ಅನುಸರಿಸಿ ನಡೆದಿರುವೆ ಯೇಕೆಂದು.

ಕಣ್ಣೀರ ಸುರಿಸಿದನು ಮಜ್ನೂನು ಲೈಲಾಳ ನೆನೆಯುತ್ತ<br>
ಎನ್ನ ಹೃದಯವ ಹಿಡಿದುಕೊಂಡಿಹ ಚೆಲುವೆ<br>
ಒಮ್ಮೆ ನೋಡಲಿ ನಿನ್ನ ಅವರೆನ್ನ ದೂಷಿಸರು.<br>
ನಿನ್ನ ನೋಡುತಲವರು ಹಣ್ಣು ಹೆಚ್ಚಲು ಹೋಗಿ<br>
ತಮ್ಮ ಕೈಯನು ತಾವೆ ಹೆಚ್ಚಿಕೊಳ್ಳುವರೇನೊ ?

ಅದು ಆಗ ಸಾಕ್ಷಿ ತಾನಾಗುವುದು ಸತ್ಯಕ್ಕೆ. ಲೈಲಾಳ ಕರೆಸಿ ನೋಡಲು ಆಗ ಅವಳ ರೂಪೆಂತು ಉನ್ಮಾದಗೊಳಿಸಿದುದು ಮಜ್ನೂನನೆಂಬುದದೆ ತಿಳಿವುದೆಂದಪ್ಪಣೆಯ ಮಾಡಿದನು. ಅರಬ ಪಾಳ್ಯಗಳೆಲ್ಲ ಹುಡು ಹುಡುಕಿ ಕಡೆಗೆ ಕಂಡವಳ ಕರೆತಂದರರಸನ ಬಳಿಗೆ. ನೋಡಿ ಅಚ್ಚರಿ ಯಾಯ್ತು ಅರಸನಿಗೆ, ಅವನ ರಾಣೀವಾಸದಲಿ ಏನೇನು ರೂಪಿಲ್ಲ ವೆಂದಾದ ತೊತ್ತು ಮೀರಿಸುತಿದ್ದಳವಳ ಚೆಲುವು ಶೃಂಗಾರದಲಿ. ದೊರೆಯು ಮನದಚ್ಚರಿಯ ಗ್ರಹಿಸಿದನು ಮಜ್ನೂನು. ಹೇಳಿದನು 'ಓ ದೊರೆಯೆ, ಲೈಲಾಳ ತಿಳಿಯುವೊಡೆ ಮಜ್ನೂನ ಕಣ್ಣಿಂದೆ ನೋಡ ಬೇಕಾಗಿಹುದು '

ಈ ಕತೆಯ ಧಾಟಿಯನ್ನು ನೋಡಿದರೆ ಲೈಲ ಮಜ್ನೂನರ ಕತೆ ಯನ್ನು ಸೂಫಿಗೀತವೆಂದು ಕೆಲವರು ಹೇಳಿದರೆ ಅದರಲ್ಲಿ ತಪ್ಪೇನೂ ಇಲ್ಲವೆನ್ನಿಸುವುದು.

ಸಾದಿ ತನ್ನ ಪುಸ್ತಕಕ್ಕೆ 'ಗುಲಿಸ್ತಾನ್' (ಹೂಗಳ ತೋಟ) ಎಂದು ಹೆಸರಿಟ್ಟು ಬರೆದುದರಲ್ಲಿಯೇ ಒಂದು ಕವಿತೆಯ ಸೊಗಸು ವ್ಯಕ್ತವಾಗು ತ್ತದೆ. ಇವನ ಬರಹಗಳು ಸುಮಾರು ೨೦-೨೨ ಹೊತ್ತಗೆಗಳಷ್ಟಾಗುತ್ತವೆ. ಅದರಲ್ಲೂ ಗುಲಿಸ್ತಾನ್ ಪುಸ್ತಕ ಜನಸಾಮಾನ್ಯದಲ್ಲಿ ಸಾದಿಯ

ಹೆಸರನ್ನು ಹರಡಲು ಎಲ್ಲುವಕ್ಕಿಂತ ಹೆಚ್ಚಿನ ಪಾತ್ರವನ್ನು ವಹಿಸಿದೆ. ' ನೋಡುವರ ಸಂತಸಕೆ ಎಬ್ಬಿಸುವೆ ನಾನೊಂದು ಹೊತ್ತಗೆಯ ರೂಪದು ದ್ಯಾನವನು, ಮಾಗಿಯಾ ಬಿರುಗಾಳಿ ಅದರೆಲೆಯ ತಾನುದುರಿಸದ ತೆರನಾಗೆ, ಋತುಗಳಾ ಪರಿವರ್ತನೆಯು ಆ ವನದ ವಸಂತವನು ಹಿಮದ ಮುಬ್ಬಿನ ಎಡೆಗೆ ಸೆಳೆಯದವೊಲಾಗೆ.' ಎಂದುಕೊಂಡು ಕವಿ ಈ ಗ್ರಂಥ ವನ್ನು ಬರೆದಿದ್ದಾನೆ. ಪುಸ್ತಕದಲ್ಲಿ ಎಂಟು ಅಧ್ಯಾಯಗಳಿವೆ, ರಾಜ ಪದ್ಧತಿ, ಸಾಧುಪದ್ಧತಿ, ತೃಪ್ತಿಪದ್ಧತಿ, ಮೌನಪದ್ಧತಿ, ಯುವಕಪದ್ಧತಿ, ವೃದ್ಧಾಪ್ಯಪದ್ಧತಿ, ವಿದ್ಯಾಪದ್ಧತಿ ಮತ್ತು ಸಮಾಜಪದ್ಧತಿ ಎಂದು. ಇದನ್ನೆ ಕವಿ 'ಗ್ರಂಥವನು ಬರೆವಂದು ಬಹಳವಾಗಿಯೆ ನೋಡಿ ಈ ಶ್ರವಣ-ಮನನ-ಧ್ಯಾನದುದ್ಯಾನದ ಲತಾಮಂಟಪಗಳನ್ನೆಂಟಾಗಿ ರಚಿಸಿದೆನು ಸ್ವರ್ಗದುದ್ಯಾನಗಳ ಹೋಲುವಂತೆ. ಅಂತು ಸಂಗ್ರಹವಾಗಿ ಬೆಳೆದುವಿವು ಬೇಸರವ ಪಡಿಸದಿರಲೆಂದು ' ಎಂದು ಹೇಳಿದ್ದಾನೆ.

ಸಾದಿಯ ದೇಶ ಮತ್ತು ಕಾಲಗಳ ಪರಿಚಯ ಮಾಡಿಕೊಂಡು ದಾಯಿತು, ಅವನ ಕವಿತಾಶಕ್ತಿಯನ್ನು ನಿರ್ಣಯಿಸಿಕೊಂಡುದಾಯಿತು. ಇನ್ನು ಅವನ ಗುಲಿಸ್ತಾನ್ ಗ್ರಂಥದಿಂದ ಕೆಲವು ಆಯ್ಕೆಗಳು. ಇದರಲ್ಲಿ ನುಡಿಗಳು, ಕತೆಗಳು ಎಂದು ಎರಡು ವಿಭಾಗ ಮಾಡಬಹುದು. 'ಸಮಾಜ ಪದ್ಧತಿ' ಎಂದು ಕರೆದಿರುವ ಅಧ್ಯಾಯದಲ್ಲಿ ಬರೀ ನುಡಿಗಳು ತುಂಬಿವೆ. ಇತರ ಅಧ್ಯಾಯಗಳಲ್ಲಿ ಕತೆಗಳಿಗೆ ಪ್ರಾಮುಖ್ಯತೆ. ನುಡಿಗಳಲ್ಲೂ ಸಾದಿಯ ಮಾತುಗಾರಿಕೆ ಕಾಣುತ್ತದೆ. ಅವುಗಳಲ್ಲಿ ಕೆಲವನ್ನು ಉದಾಹರಿಸಿ ಈ ಪ್ರಬಂಧವನ್ನು ಮುಗಿಸಬಹುದು.

ಸಲ್ಲದ ಮಾರ್ಗ: ಓದುವುದು ಕಲಿಯುವುದು ಧರ್ಮದಾ ಕಟ್ಟಳೆಯ ಭದ್ರವಾಗಿಸಲೆಂದು, ಜಗದ ದುರ್ವೃತ್ತಿಗಳಿಗೆಂದಲ್ಲ.

ಕಟ್ಟುಕಟ್ಟಳೆ ಭಕ್ತಿ ಶಾಸ್ತ್ರಗಳನಿವನೆಲ್ಲ
ಸಲ್ಲದಾ ಮಾರ್ಗಕ್ಕೆ ತಿರುಗಿಸಲು ಕೇಳಯ್ಯ,
ಕೊಯಿಲಾದ ಧಾನ್ಯವನು ಒಟ್ಟಿ ಒಣವೆಯ ಹಾಕಿ
ಒಮ್ಮೆಯೇ ಅದಕೆಲ್ಲ ಉರಿಯ ತಾನಿಟ್ಟಂತೆ.

ಹೊಂದಿಕೆ: ವಸ್ತುಗಳು ಮೂರಕ್ಕೆ ಉಳಿವಿಲ್ಲ ಕೂಡದಿರೆ ಮೂರ ವಕೆ; ಬಾಳದದು ಧನರಾಶಿ ವ್ಯಾಪಾರವಿಲ್ಲದೆಲೆ, ಬಾಳದದು ವಿದ್ಯೆ ಕುರಿತು ತರ್ಕವ ಮಾಡದಿರೆ, ಬಾಳದದು ದೊರೆತನವು ಅಚ್ಚುಕಟ್ಟಿಲ್ಲದೆಲೆ.

ನಡುಮಾತು: ಜಗಳದೊಳಗಿರುವರಿಬ್ಬರ ನಡುವೆ ಮಾತನಾಡುವೆ ಯೇನು? ಎಚ್ಚರಿಕೆ, ಸ್ನೇಹಕ್ಕೆ ಬರಲವರು ನೀನೆ ಹೇಸಿಗೆ ಮನುಜ ನಾಗದಿರು.

ಜ್ವಾಲೆಯುಂದದಿ ಕೇಳು ಇಬ್ಬರಾಡುವ ಜಗಳ,
ಅರಿಯುದಾಡುವನದಕೆ ಕಟ್ಟಿಗೆಯು ಹೊತ್ತಂತೆ.
ಮಾತು ಮುಗಿಯಲು ಮತ್ತೆ ಗೆಳೆಯರಾಗುವರವರು
ಎರಡುಕಡೆಗಾಹುತಿಯು ಮಧ್ಯೆ ನಿಂತವನವನು.
ಇಬ್ಬರಾ ನಡುವಿನಲಿ ಕಿಚ್ಚು ಹೊತ್ತಿಸಿ ತಾನು
ಎದ್ದ ಉರಿಯುಲಿ ಬಿದ್ದು ಸುಟ್ಟುಕೊಳ್ಳುವುದೇಕೆ?

ಶತ್ರುಗಳು: ಇಬ್ಬರಾ ಮಾನವರು ಲೌಕಿಕದ ಧಾರ್ಮಿಕದ ಶತ್ರುಗಳು, ಕರುಣೆಯಿಲ್ಲದ ಅರಸು, ವಿದ್ಯೆಯಿಲ್ಲದ ಸಾಧು.

ರಾಜ್ಯಕ್ಕೆ ದೊರೆಯೆನಿಸಿ ಇಹುದವನು ಸರಿಯಲ್ಲ
ದೇವನಾಣತಿಗವನು ತಲೆವಾಗದಿರುವವನು.

ಕೋಪ ಕೂಡದು: ದೊರೆ ತನ್ನ ಶತ್ರುಗಳ ಕಾಣುವನೆ ಕೋಪದಲಿ, ಬಹುಕೋಪ ಮಾಡದಂತಿರಬೇಕು. ಹಾಗೆ ಮಾಡಲು ಆಗ ಗೆಳೆಯರೂ ನಂಬಿಕೆಯು ತೊರೆಯಲುವರು. ಕೋಪದಾ ಜ್ವಾಲೆಯುದು ವೊದಲು ತಟ್ಟುವುದವಗೆ ಕೋಪವನು ಮಾಡಿದಗೆ; ಆ ಮೇಲೆ ನುಗ್ಗುವುದು ಎದು ರಾಳ ಪಂಗಡಕೆ; ಮುಟ್ಟಿಯಾದರು ಮುಟ್ಟಬಹುದವರ, ಮುಟ್ಟದಿರ ದಿದ್ದರೂ ಇರಬಹುದು.

ಆದಮುನ ಕುಲದವರು ಮಣ್ಣಿಂದೆ ಆದವರು,
ಸಲ್ಲದವರಿಗೆ ಆ ಹೆಮ್ಮೆ ಆ ಕೋಪತಾಪಗಳು.
ಧರಣಿ ಇತ್ತುದು ಅಲ್ಲ ನಿನ್ನ ಆಟೋಪಗಳು
ಅಗ್ನಿಯಿಂದಾವರಿಸಿ ಹಬ್ಬಿದುಡು ಇರಬೇಕು,

ಬೈಲ್ಯಾನ ಪ್ರಾಂತದಲಿ ಸಾಧುವೊಬ್ಬನ ಕಂಡು
ಬೆಳಕು ಬರುವಂದದಲಿ ಬುದ್ಧಿಯನು ಹೇಳೆಂದೆ.
ಹೇಳಿದನು ಶಾಸ್ತ್ರಗಳ ಓದಿದವನೇ ಹೋಗು,
ಶಾಂತನಾಗಿರು ನೀನು ಭೂಮಿಯಂದದೊಳೀಗ,
ಇರಲಾರೆನೆನ್ನುವೆಯ ಓದಿದುದನೆಲ್ಲವನು
ಭದ್ರವಾಗಿಯೆ ಹೂಳು ಭೂಮಿಯೊಳಗಡೆಯೆಂದು.

ಶುಭನುಡಿ: ಮನಸ ನೋಯಿಸುವೊಂದು ವಿಷಯವಿರುತಿಹುದುಂಟೆ ನಿನ್ನೊಳೇ ಇರಲಿಯದು, ಇನ್ನೊಬ್ಬನದನು ಹೇಳುವವರೆಗೆ:

ಶುಭದ ಹಕ್ಕಿಯೆ ಹಾಡಿ ನುಡಿ ವಸಂತವ ನೀನು
ಅಪಶಕುನ ನುಡಿ ಇರಲಿ ಗೂಗೆಗಳ ತಂಡಕ್ಕೆ.

ಮಾತಾಡಿ ಕೆಡಬೇಡ: ದೊರೆಗೆ ಹೇಳಲುಬೇಡ ಇಂತೊಬ್ಬ ದ್ರೋಹ ವೆಸಗಿಹನೆಂದು ವಿಷಯದಾ ಕುದಿಮೊದಲು ನಿನಗೆ ತಿಳಿಯದ ಮುನ್ನ. ತಿಳಿಯದೇ ಆಡಿದರೆ ನಿನಗೆಯೇ ಕಾದಿಹುದು ಅಪಮಾನ.

ಮಾತನಾಡುವ ಮುನ್ನ ತೂಗಿ ಆಡುವುದಯ್ಯ
ಆಡಿದೊಡೆ ಇತರರಿಗೆ ಒಪ್ಪುವಂತಿರಬೇಕು.
ಮನುಜನಿಗೆ ಬಲವಿಹುದು ಮಾತಿನಿಂದಲೆ ಕೇಳು
ಮಾತಾಡಿ ಕೆಡಬೇಡ ಎಲೆ ಅಯ್ಯ ಎಚ್ಚರಿಕೆ.

ಬುದ್ಧಿ: ಮೂರ್ಖನಿಗೆ ಬುದ್ಧಿಯನು ಹೇಳಹೊರಟವನಿಹನೆ, ಅವನಿಗೊಬ್ಬನು ಬೇಕು ಬುದ್ಧಿಯನು ಹೇಳುವನು.

ತಿಳಿವು: ತಿಳಿಯದನು ಮೌನವಾಗಿರೆ ಲೇಸು; ಇದನರಿಯೆ ಇನ್ನವನು ತಿಳಿಯದನು ತಾನಲ್ಲ.

ನಂಬಿಕೆ: ಮಾನವರ ಕುಂದುಗಳ ಬಯಲು ಮಾಡದಿರಯ್ಯ; ಇತರರಿಗೆ ತರಲು ನೀನಪವಾದ ಕಳೆದುಕೊಳ್ಳುವೆ ನೀನು ನಿನಗಿರುವ ನಂಬಿಕೆಯ.

ಕಾರ್ಯ: ಓದನೋದಿಯು ತಾನು ಕಾರ್ಯಕ್ಕೆ ತರದವನು, ಉತ್ತು ಭೂಮಿಯನೆಲ್ಲ ಬೀಜವನು ಬಿತ್ತದಲೆ ಸುಮ್ಮನಿದ್ದವನಂತೆ.

ಹೃದಯವಿಲ್ಲದೆ ಭಕ್ತಿ ಬೆಳೆವುದೆಂಬುದು ಸುಳ್ಳು, ತಿರುಳು ಇಲ್ಲದೆ ಚಿಪ್ಪು ಲಾಭ ತರುವುದು ಸುಳ್ಳು.

ಪರದೆ: ಪರದೆಯಲಿ ಅಡಗಿಹುದು ಎಷ್ಟೊ ಚೆಲುವಿನ ರೂಪು,
ಈ ಪರದೆ ತೆಗೆಯಲಿದಿರಲಿ ಇಹುದು ಬೇರೊಂದು.

ಬೆಲೆ: ರಾತ್ರಿರಾತ್ರಿಯು ಎಲ್ಲ ರಮ್ಜಾನ ರಾತ್ರಿಯದು ತಾನಾಗೆ, ರಮ್ಜಾನ ರಾತ್ರಿಗೇನುಂಟು ಬೆಲೆ?

ಕಲ್ಲು ಹರಳುಗಳೆಲ್ಲ ಬದಕ್‌ಷಾನ ಕೆಂಪುಗಳು
ತಾವಾಗೆ ಇವಕೊಂದು ಬೆಲೆಯ ಕಟ್ಟುವರಾರು?

ಹೊಟ್ಟೆ: ಹೊಟ್ಟೆಯಾತುರವಿಲ್ಲದಿರೆ ಹಕ್ಕಿ ಬಲೆಯೊಳಗೆ ಬೀಳದದು. ಹೊಟ್ಟೆಗಾಗಲ್ಲದಿರೆ ಬೇಟೆಯನು ಬಲೆಯ ಬೀಸುವನೇಕೆ?

ಗುಣವಂತ: ವೈದ್ಯನಂಗಡಿ ಪಾತ್ರ ಬುದ್ಧಿಯುಳ್ಳ ಮನುಜ; ಒಳಗೆ ಗುಣಗಳು ಉಂಟು, ಮೇಲೆ ಮೌನದ ವ್ರತವು. ರಣಭೇರಿ ಮೂರ್ಖನಾಗಿಹ ಮನುಜ; ಗರ್ಜನೆಗೆ ಮಿತಿಯಿಲ್ಲ ಒಳಗೆಲ್ಲ ಬರಿಟೊಳ್ಳು.

ಗುಹೆ: ಜನರು ಮೆಚ್ಚಲಿಯೆಂದು ಈ ತೆರನೇಕೆ ಗುಹೆಯಲಿ
ಕುಳಿತುಕೊಳ್ಳುವೆ ಮಾನವ!
ಮಂಕು ಕವಿದಾ ತನ್ನ ಹೃದಯದ ಕನ್ನಡಿಯಲವ-
ನೇನು ತಾನೇ ನೋಡುವ? ||

ಕತ್ತಲಾದಾ ಗುಹೆಯ ಒಳಗೇ ಹೋಗಿ ಸುಮ್ಮನೆ
ಕುಳಿತುಕೊಂಡುದು ಆಯಿತು |
ಬೆಳಕು ಬೀರುವ ದೇವನನ್ನು ಹೊರಗೆ ಹೊರಗೇ
ಬಿಟ್ಟು ನಡೆದುದು ಆಯಿತು ||

ವಿಧಿ: ವಿಧಿಯಲ್ಲದೇತಕ್ಕೆ ಜದಲದಾ ನದಿಯಲ್ಲಿ ಅಂಬಿಗನು ಹಿಡಿಯುವನು ಮೀನನ್ನು? ವಿಧಿಯಲ್ಲದೇತಕ್ಕೆ ಆ ಮೀನು ಮರಳು ಗುಡ್ಡೆಯ ಸೇರಿ ಸಾಯುವುದು?

ಜಿಪುಣ ಲೋಕವನೆಲ್ಲ ಸುತ್ತಾಡಿಕೊಂಡಿಹನು
ಚಿನ್ನಕ್ಕೆ, ವಿಧಿಯಿಹುದು ಅವನ ಬೆನ್ನಿನ ಹಿಂದೆ.

ಧನಿಕ, ಬಡವ: ಪಾಪಿಯಾದಾ ಧನಿಕ ಮೆರುಗು ಕಟ್ಟಿದ ಮಣ್ಣು, ಭಕ್ತಿವಂತನು ಬಡವ ಮಣ್ಣು ಮೆತ್ತಿದ ಹೊನ್ನು. ಮೂಸಾನ ಹರಕು ವಸ್ತ್ರವು ಒಬ್ಬ. ಫೇರೂನ ನಿಲುವಂಗಿ ಇನ್ನೊಬ್ಬ. ಒಳ್ಳಿದರ ಬಡತನವು ಮೇಲು. ಲೋಕದ ಕಡೆಗೆ ಎತ್ತುವುದು ತಾನವರ ಮುಖಗಳನು, ಕೆಡುಕರಾ ಸಿರಿತನವು ಅವರ ಸಿರಿಗಳ ತಾನು ನೆಲಕೆ ತಗ್ಗಿಸುತಿಹುದು.

ಬರಿಪಾಠ: ಆಸಕ್ತಿಯಿಲ್ಲದಿಹ ಅಭ್ಯಾಸಿ ಹಣವಿರದ ಪ್ರೇಮಿಯಂದದೊಳವನು, ತಿಳಿವಳಿಕೆ ಸಾಲದಿಹ ಪಯಣಿಗನು ರೆಕ್ಕೆಯಿಲ್ಲದ ಹಕ್ಕಿ. ಓದೋದಿ ಕಾವ್ಯವರಿಯದ ಮನುಜ ಹಣ್ಣಿಲ್ಲದಾ ಮರವ ಹೋಲುವನು. ವಿದ್ಯೆಯಿಲ್ಲದ ಭಕ್ತ ಬಾಗಿಲಿಲ್ಲದ ಮನೆಯು. ಸ್ವರ್ಗದಿಂ ಮನುಜ ಲೋಕಕೆ ಏಕೆ ತಂದುದು ಕುರಾನ ಗ್ರಂಥವನು, ಅದು ಜನಕೆ ನೀತಿಯು ತಿಳಿಸಬೇಕೆಂದು, ಬಾಯಿಪಾಠವ ಮಾಡಿ ಸುಮ್ಮನೇ ಪಂಕ್ತಿಗಳ ಹೇಳುವುದಕೆಂದಲ್ಲ. ನಿಜವಾದ ಭಕ್ತಿಯುಳ್ಳವನು ಸಾಮಾನ್ಯ ಕಾಲ್ನಡಗೆ ನಡೆದುಹೋಗಿಹ ಮುಂದೆ, ಸೋಮಾರಿ ಪಂಡಿತನು ಕುದುರೆ ಏರಿಯೆ ತಾನು ಮಲಗಿಹನು. ತನ್ನೊಳಗೆ ತಾನು ಪ್ರಾರ್ಥನೆಗಳನು ಸಲ್ಲಿಸುವ ಪಾಪಿಯಾದರು ಮೇಲು, ಗರ್ವದಲಿ ಭಕ್ತ ತಾನೆಂಬವಗೆ

ಪರಾನ್ನ: ಮೊರೆ ಕೊಟ್ಟ ನಿಲುವಂಗಿ ಘನವಾಗಿ ಇರಬಹುದು. ಉಚಿತವರಿಯಲು ಅಯ್ಯ ನಮ್ಮ ಆ ಹರಕು ವಸ್ತ್ರವೆ ಮೇಲು. ದೊಡ್ಡವರ ಔತಣದ ಭಕ್ಷ್ಯಗಳು ಸೂಕ್ಷ್ಮವಾಗಿಹುದುಂಟು. ಸವಿಯ ಕೇಳು ಪೊಡಮ್ಯ್ಯ ನಮ್ಮ ಮನೆಯೂಟವೇ ಬಲು ಸೊಗಸು.

ನಮ್ಮ ಮನೆಯಲಿ ನಮ್ಮ ಉಪ್ಪು ಉಪ್ಪಿನಕಾಯಿ
ಸಾಹುಕಾರರ ಮನೆಯ ಹೋಳಿಗೆಯು ಪರಮಾನ್ನ

# ಹಾಫಿಸ್

ಹಾಫಿಸನು ಯಥೇಚ್ಛವಾಗಿ ಗಜಲುಗಳನ್ನೂ ಕೆಲವು ಇತರ ಪದ್ಯಗಳನ್ನೂ ಬರೆದು ಪರ್ಷಿಯಾದೇಶದ ಕವಿಶ್ರೇಣಿಯಲ್ಲಿ ಗಣ್ಯವಾದ ಸ್ಥಾನವನ್ನು ಗಳಿಸಿದ್ದಾನೆ. ಇವನ ಪರಿಚಯವನ್ನು ಇವನ ಕೆಲವು ಗಜಲುಗಳಿಂದಲೇ ಪ್ರಾರಂಭ ಮಾಡಬಹುದು.

ಗಜಲು ಪಾರಸಿ ಭಾಷೆಯ ಒಂದು ವಿಶೇಷ ರೀತಿಯ ಪದ್ಯರಚನೆ. ಈ ಪದ್ಯ ಯಾವಾಗಲೂ ಇಷ್ಟೇ ಸಾಲು ಉಳ್ಳದಾಗಿರಬೇಕೆಂಬ ನಿಯಮವಿಲ್ಲ. ಪದ್ಯ ಸಣ್ಣದಾಗಿ ಇರಬಹುದು, ಉದ್ದವಾಗಿ ಇರಬಹುದು. ಒಂದು ಗಜಲಿನಲ್ಲಿ ಐದು ಸಾಲುಗಳಿಂದ ಹಿಡಿದು ೧೬–೧೭ ಸಾಲುಗಳವರೆಗೂ ಇರುತ್ತವೆಂದು ಲೆಕ್ಕವಿಟ್ಟುಕೊಳ್ಳಬಹುದು. ಎಷ್ಟೇ ಸಾಲಿದ್ದರೂ ಗಜಲಿನ ಎಲ್ಲ ಸಾಲುಗಳ ಕಡೆಯಲ್ಲಿಯೂ ಪ್ರಾಯಶಃ ಒಂದೇ ಪ್ರಾಸ ಬರುತ್ತದೆ. ಪಾರಸಿ ಭಾಷೆಯಲ್ಲಿ ಪದ್ಯದ ಸಮವಾದ ಎರಡು ಅರ್ಧ ಸಾಲುಗಳು ಸೇರಿ ಒಂದು ಸಾಲು ಆಗುತ್ತದೆ. ಮೇಲೆ ಹೇಳಿದ ಪ್ರಾಸ ನಿಯಮವಲ್ಲದೆ ಗಜಲಿನ ಮೊದಲನೆಯ ಸಾಲಿನಲ್ಲಿ ಮೊದಲರ್ಧದ ಅಂತ್ಯಾಕ್ಷರಕ್ಕೂ, ಎರಡನೆಯ ಅರ್ಧದ ಅಂತ್ಯಾಕ್ಷರಕ್ಕೂ ಪ್ರಾಸವುಂಟು. ಗಜಲಿನ ಕಡೆಯಲ್ಲಿ ಕೀರ್ತನೆಗಳಲ್ಲಿ ಇರುವಂತೆ ಕವಿಯ ಹೆಸರು ಬರುತ್ತದೆ. ಪಾರಸಿ ಭಾಷೆಯ ಗಣಗಳನ್ನು ನೋಡುತ್ತ ಹೋದರೆ, ಅವು, ಅದರಲ್ಲೂ ಗಜಲುಗಳಲ್ಲಿ ಬಳಕೆಯಲ್ಲಿರುವವು, ಕನ್ನಡದಲ್ಲಿನ ೩, ೪, ೩, ೪, ಎಂಬ ಭಾಮಿನಿಯ ಗಣಗಳ ಓಟಕ್ಕೆ ಇಳಿಯುತ್ತವೆ ಎನ್ನಬಹುದು; ಒಮ್ಮೊಮ್ಮೆ ವಾರ್ಧಿಕದ ದಾಟಿ ಹೊಂದುವುದೂ ಉಂಟು.

ಗಜಲಿನಲ್ಲಿ ಬರುವ ಕೆಲವು ಗಣಗಳ ದಾಟಿಯನ್ನು ತೋರಿಸುವುದಕ್ಕಾಗಿ ಪಾರಸಿಯ ನುಡಿಗಳನ್ನೇ ಕನ್ನಡ ಅಕ್ಷರಗಳಲ್ಲಿ ಬರೆದು ಉದಾಹರಣೆ ಕೊಡಬಹುದು.

(೧) ವಾಯಿಜಾಂ ಕೀಂ | ಜಲ್ವ ಬರ್ ಮಿ| ಹ್ರಾಬೊ ಮಿಂಬರ್ |
ಮೀಕುನಂದ್

ಚೂಂ ಬ ಖ಼ಿಲ್ವತ್ | ಮೀರವಂದ್ ಆಂ | ಕಾರೆ ದೀಗರ್ |
ಮೀಕುನಂದ್*

ಇದು ಒಂದು ಸಾಲು. ಇದರ ಓಟ

ಫ಼ಾಯಿಲಾತನ್ | ಫ಼ಾಯಿಲಾತನ್ | ಫ಼ಾಯಿಲಾತನ್ |
ಫ಼ಾಯಿಲನ್
ಫ಼ಾಯಿಲಾತನ್ | ಫ಼ಾಯಿಲಾತನ್ | ಫ಼ಾಯಿಲಾತನ್ |
ಫ಼ಾಯಿಲನ್

ಹೀಗೆ ಇರುತ್ತದೆ. ಗುರು ಲಘು ಚಿಹ್ನೆಗಳ ಪ್ರಕಾರ:

— ᴗ — — | — ᴗ — — | — ᴗ — — | — ᴗ —
— ᴗ — — | — ᴗ — — | — ᴗ — — | — ᴗ —

(೨) ಇಲಾಯಾ ಅ | ಯ್ಯುಹಾ ಸಾಕೀ | ಅದಿರ್ ಕಾಸಾ |
ವನಾ ದಿಲ್ಹಾ
ಕೆ ಯಿಷ್ಕ್ ಆಸಾಂ | ನುಮೂ ದವ್ವಲ್ | ವಲೇ ಉಫ಼್ತಾ |
ದ ಮುಷ್ಕಿಲ್ಹಾ†

---

* ಈ ವಿವರವನ್ನು ನೋಡಿದರೆ ಪಾರಸಿ ಪದ್ಯದ ಒಂದು ಪೂರ್ಣವಾದ ಸಾಲು ಕನ್ನಡದಲ್ಲಿ ಎರಡು ಸಾಲುಗಳಾಗಿ ಕಾಣುತ್ತದೆ ಎಂದು ಗೊತ್ತಾಗುವುದು.

ಏನು ಹುರುಪಿನ ಮಾತು ಏನು ಏನುಪದೇಶ
ಬೋಧಕರು ಕಟ್ಟೆ ಜಗಲಿಗಳೇರಿ ನುಡಿವಾಗ
—ಇದು ಒಂದು ಸಾಲಿನ ಪೂರ್ವಾರ್ಧ;
ನುಡಿದ ರೀತಿಯೆ ಬೇರೆ ನಡೆಯು ತೆರನೇ ಬೇರೆ
ಮರೆಯಾಗಿ ತಂತಮ್ಮ ಸ್ಥಳಗಳಿಗೆ ಹೋದಾಗ
—ಇದು ಉತ್ತರಾರ್ಧ.

† ದಾನಿ ಎಮ್ಮೊಳು ಭಕ್ತಿ ಮಧುವನು ತುಂಬಲೆನ್ನುತ ಬೇಡುವ
ಕಂಡು ಕರೆದಿತು ಮತ್ತೆ ನುಸುಳಿತು ಪ್ರೇಮವೆಂತಮ ನೋಡುವ.—

ಇದರ ಓಟ

ಫ಼ವೂಲಾತನ್ | ಫ಼ವೂಲಾತನ್ | ಫ಼ವೂಲಾತನ್ | ಫ಼ವೂಲಾತನ್
∪ — — — | ∪ — — — | ∪ — — — | ∪ — — —

ಹೀಗಿರುತ್ತದೆ.

(೩) ಒಂದು ಸಣ್ಣ ಸಾಲು
ಗರ್ ಜೆ ಬದ್ ನಾ | ಮೇಸ್ತ ನಸ್ದೇ | ಆಖ಼ಿಲಾಂ
ಮಾ ನ ಮೀಹಾ | ಹೇಮು ನಂಗೋ | ನಾಮುರಾ *
ಫ಼ಾಯಿಲಾತನ್ | ಫ಼ಾಯಿಲಾತನ್ | ಫ಼ಾಯಿಲನ್
— ∪ — — | — ∪ — — | — ∪ —

ಇಷ್ಟೇ ಇರಬಹುದು.

(೪) ಯೀದಸ್ತೊ ವೋಸಿಮೇ ಗುಲ್ ಸಾಕೀ ಬಯಾರ ಬಾದಾ
ಹಂಗಾಮೆ ಗುಲ್ ಕೆ ದೀದಸ್ತ್ ಜೇ ಮೈ ಕದಹ್ ನಿಹಾದಾ‡

ಈ ಸಾಲಿನ ಓಟ ಸುಮಾರು ಹೀಗಿದೆ.

— — ∪ — ∪ — — — — ∪ — ∪ — —

ಇದು ಗುರು ಲಘು ವಿಭಜನೆ.

ಇದು ಗಜಲಿನಲ್ಲಿ ಬರುವ ಗಣಗಳ ವಿಷಯ. ಪ್ರಾಸವಿಧಾನಕ್ಕಾಗಿ ಒಂದು ಇಡಿಯ ಗಜಲನ್ನು ನೋಬಹುದು. 'ದಾನಿಯೆಮ್ಮೊಳು ಭಕ್ತಿ ಮಧುವನು ತುಂಬಲೆನ್ನುತ ಬೇಡುವ' ಇದರ ಮೂಲ ಪದ್ಯ ಹೀಗಿರುತ್ತದೆ:

ಇಲಾಯಾ, ಅ | ಯ್ಯುಹಾ, ಸಾಕೀ, | ಅದಿರ್, ಕಾಸಾ, |
ವನಾ ದಿಲ್ಹಾ,
ಕೆ, ಯಿಷ್ಕ್, ಸಾಂ, | ನುಮೂ, ದವ್ವಲ್, | ವಲೇ, ಉಫ಼್ತಾ |
ದ, ಮುಷ್ಕಿಲ್ಹಾ,

---

* ಅರ್ಥ: ಬುದ್ಧಿವಂತರ ಕಣ್ಣಿಗೆ ಕೆಟ್ಟವರೆನಿಸಲು–ಹೆಸರನೊಲ್ಲೆವು ಬೇಡಲು.

‡ ಅರ್ಥ: ಇಂದು ಹೂಗಳ ಹಬ್ಬ ಗೆಳೆಯ ತಾರಾ ಮಧುವನು–ಉಂಟೆ ಹೂಗಳ ಕಾಲ? ಬಿಟ್ಟು ಪಾನದ ಸವಿಯನು?

ಬ, ಬೋಯೇ, ನಾ | ಫಯೇ, ಕಾಹಿರ್, | ಸಬಾ, ಸಾಂ, ತರ್ |
ಹ, ಬಕಪಾಯದ್,
ಸ, ತಾಬೇ, ಜಾ | ದೆ, ಮಿಷ್ಕೀನಪ್, | ಚೆ, ಖೂನ್, ಉಫ್ತಾ |
ದ, ದರ್, ದಿಲ್ಹಾ,
ಬ, ಮೈ, ಸಿಜ್ಜಾ | ದ, ರಂಗೀಂ, ಕುನ್, | ಗರತ್, ಪೀರೇ, |
ಮುಗಾಂ, ಗೋಯದ್,
ಕೆ, ಸಾಲಿಕ್, ಬೇ | ಖಬರ್, ನಬುವದ್, | ಸ, ರಾಹೊ, ೯, ರು |
ಸ್ಮೆ, ಮನ್ಜಿಲ್ಹಾ,
ಮರಾ, ದರ್, ಮ | ನ್ಜಿಲೇ, ಜಾನಾಂ, | ಚೆ, ಅಮ್ನೋ, ಐ |
ಷ, ಚೂಂ, ಹರ್ದಮ್,
ಜರಸ್, ಫರ್ಯಾ | ದ, ಮೀದಾರದ್, | ಕೆ, ಬರ್ಬಂದೇ |
ದ, ಮುಹ್ಮಿಲ್ಹಾ,
ಷಬೇ, ತಾರೀಕ್, | ಒ, ಬೀಮೋ, ಮೋ | ಜೊ, ಗರ್ದಾಬೇ, |
ಚುನೀ, ಹಾಯಲ್,
ಕುಜಾ, ದಾನಂ | ದ, ಹಾಲೇ, ಮಾ, | ಸಬಕ್ಸಾರಾ | ನೆ, ಸಾಹಿಲ್ಹಾ,
ಹಮಾ, ಕಾರಂ, | ಸ, ಖುದ್‌ಕಾಮೀ, | ಬ, ಬದ್ ನಾಮೀ, |
ಕಷೀ, ದಾಖಿರ್,
ನಿಹಾಂ, ಕೀಂ, ಮುಂ | ದ, ಅಂ, ರಾಸೇ, | ಕ, ಸೋ, ಸಾಸಂ |
ದ, ಮುಹ್ಫಿಲ್ಹಾ,
ಹುಸೂರೀ, ಗರ್, | ಹಮೀ, ಹಾಹೀ, | ಅಸೋ, ಗಾಯಬ್, |
ಮುಪಾ, ಹಾಫಿಸ್,
ಮತೀ, ಮಾ, ತ | ಲ್ಕ, ಮನ್, ತಪ್ಪೀ, | ವ ಅ, ದ್ದುನ್ಯಾ, |
ಒ, ಅಮುಹಲ್ಹಾ,*

ಹಿಂದಿನ ಉದಾಹರಣೆಗಳ ಪ್ರಕಾರ ಗಣ ಸಂಖ್ಯೆ ಮತ್ತು ರೀತಿಯಲ್ಲಿ ಪದ್ಯದ ಸಾಲುಗಳನ್ನು ಸ್ವಲ್ಪ ಸ್ವಲ್ಪ ವ್ಯತ್ಯಾಸ ಮಾಡಿ

* ಅನುಸ್ವಾರ ಬಳಸಿರುವ ಕಡೆಯಲ್ಲಿ ಅರ್ಧಾನುಸ್ವಾರದ ಉಚ್ಚಾರಣೆ ಮಾತ್ರ ಇದೆ.

ಕೊಂಡಾಗ್ಲೂ ಈ ಒಂದು ಪ್ರಾಸನಿಯಮವನ್ನು ಪಾಲಿಸಿಕೊಂಡು ಬರುತ್ತಿರುವುದು ಗಜಲುಗಳಲ್ಲಿ ಎದ್ದು ಕಾಣುತ್ತದೆ. ಪ್ರಾರಂಭದ ಸಾಲು, ಕಡೆಯ ಸಾಲು, ಪ್ರಾಸ, ಒಟ್ಟಿನಲ್ಲಿ ಹಾಡುವುದಕ್ಕೆ ಅನುಕೂಲವಾಗುವ ಒಂದು ದಾಟಿ ಇವು ಗಜಲಿನ ಕಟ್ಟುಗಳು. ಇದನ್ನು ಇಂಗ್ಲೀಷಿನ 'ಓಡ್' ಮತ್ತು 'ಸಾನೆಟ್ಟ್'ಗಳಿಗೆ ಹೋಲಿಸುವುದುಂಟು.

ಹಾಫಿಸ್ ಕವಿಯ ಕೆಲವು ಗಜಲುಗಳನ್ನು ಕನ್ನಡಿಸಿ ಇಲ್ಲಿ ಕೊಡಲಾಗಿದೆ.

೧

ಭಕ್ತಿಮಧುವನು ದಾನಿ ಎಮ್ಮೊಳು ತುಂಬಲೆನ್ನುತ ಜೀಡುವ
ಕಂಡು ಕರೆದಿತು ಮತ್ತೆ ನುಸುಳಿತು ಪ್ರೇಮವೆಂತದು ನೋಡುವ.—
ಗಾಳಿ ಆ ಮಾಳಿಗೆಯ ಪರಿಮಳ ನೀಡಲೆನ್ನುತ ಕೇಳಿದೆ
ಪೇಳಲೇನಾ ಕುರುಳ ಸೊಬಗಿಗೆ ನುಲಿವ ಹೃದಯದ ತಾಪವ?—
ಅಂಗಡಿಯ ಗುರುವಿತ್ತ ಮಧುವೇ ಸಾಕು; ಪೂಜೆಗೆ ಸಲ್ಲಿಸು
ದಾರಿ ತಾಣದ ಬಳಕೆ ಕಾಣನೆ? ಆತ ಮೋಣೀ ಪಯಣವ.—
ಗೆಳೆಯರೆಡೆಯಲಿ ಇರುಳ ಸಂತಸದಿಂದೆ ಕಳೆವುದ ಕಾಣೆನು
ಗಂಟೆ ಒರಲುತಲಿರಲು ಮೂಟೆಯ ಕಟ್ಟ ಎನ್ನುವ ನಿನದವ —
ಕಡಲ ಸುಳಿ ಬಿರುಗಾಳಿ ಕಗ್ಗತ್ತಲೆಯ ಗುಡುಗಿಗೆ ಸಿಲುಕದೆ
ದಡದೊಳುಳಿದವರೆಂತು ಅರಿವರು ಎನ್ನ ಭೀತಿಯ ಭಾವವ?—
ಎಲ್ಲ ಕಾರ್ಯದ ಕಡೆಗೆ ದೂಷಣೆ ನನಗೆ ನಾನೇ ತಂದುದು
ಜನರ ಬಾಯಿಗೆ ಬಿದ್ದ ಮಾತದು ಕಾಣೆ ಮರೆಯಿಸುವಂದವ —
ಉಂಟೆ ದರ್ಶನದಾಶೆ ಹಾಫಿಸ್? ಬಿಡಲು ಬೇಡಾ ಹಾದಿಯ
ಗೆಳೆಯನೊಪ್ಪಿಗೆ ಸಾಕು ಅಳದಿರು ಕಟ್ಟಿಕೊಂಡೀ ಲೋಕವ —

ಇದು ಹಾಫಿಸ್ ಕವಿಯ 'ದೀವಾನ್' ಗ್ರಂಥದಲ್ಲಿ ಮೊದಲನೆಯ ಪದ್ಯ. ಅವನ ಗಜಲುಗಳಿಗೆಲ್ಲ ಸೂಫಿ ಪಂಥಕ್ಕೆ ಅನುಸಾರವಾಗಿ ಅರ್ಥ ಮಾಡಲು ಹೊರಟವರು ಈ ಪದ್ಯಕ್ಕೆ ಆ ಸ್ಥಾನವನ್ನು ಕೊಟ್ಟಿದ್ದರೆ ಅದು ಅಚ್ಚರಿಯೇನೂ ಅಲ್ಲ. ಹೃದಯವೇ ಬಟ್ಟಲು; ಅದನ್ನು ತುಂಬುವ

ವನು (ತುಂಬುವವಳು) ಸಾಕಿ; ಸಾಕಿ ಎಂಬ ಪಾರಸಿ ಪದವನ್ನು ಇಲ್ಲಿ ದಾನಿ ಎಂದು ಕನ್ನಡಿಸಿದೆ. ಮಾಳಿಗೆಯ ಮೇಲೆ ತನ್ನ ಪ್ರಿಯಳಿದ್ದಾಳೆ; ಗಾಳಿ ಅವಳ ಕುರುಳನ್ನು ಸವರಿಕೊಂಡು ತನ್ನ ಕಡೆಗೆ ಬೀಸುತ್ತಿದೆ–ಈ ಒಂದು ಚಿತ್ರವನ್ನು ಕವಿ ಕಲ್ಪಿಸಿದ್ದಾನೆ. ಗಾಳಿ ಎಂದರೆ ದೇವನ ಕಡೆಯಿಂದ ಬರುವ ಆಶೆಯ ಕಿರಣ; ಮನುಷ್ಯನ ಹೃದಯ ದೇವನನ್ನು ಕಾಣಲು ಹಂಬಲಿಸುತ್ತದೆ– ಇದು ಸೂಫಿ ಅರ್ಥ. ಅಂಗಡಿಯ ಗುರು ಎನ್ನುವುದಕ್ಕೆ ಪಾರಸಿ ಮೂಲ 'ಪೀರೆ ಮುಗಾನ್' ಎಂದಿದೆ. ಅಗ್ನಿ ಪೂಜಕರ ಪೂಜಾಸ್ಥಾನದ ಪುರೋಹಿತನಿಗೆ ಮೊದಲು ಈ ಹೆಸರಿತ್ತು. ಬರಬರುತ್ತ ಈ ಮಾತಿಗೆ ಹೆಂಡದಂಗಡಿಯ ಯಜಮಾನನೆಂಬ ಅರ್ಥ ಆಯಿತಂತೆ. ಸೂಫಿಗಳ ಕೈಯಲ್ಲಿ ಸಿಕ್ಕಿ ಮತ್ತೆ ಈ ಹೆಸರಿಗೆ ಗುರುಪದವಿ ಬಂದಿತಂತೆ. ಜೀವ ದೇವನ ಕಡೆಗೆ ಒಂದು ಪ್ರಯಾಣ. ಮಾರ್ಗದಲ್ಲಿ ಆಗಾಗ್ಗೆ ಹುರುಪು ಕೊಡುವವನು ಅಂಗಡಿಯ ಗುರು.

೨

ಷೀರಾಸ್ ಕವಿಯ ಊರು – ಅದು ಅವನ ಪ್ರಿಯಳ ಆವಾಸ.

ಏನು ಸೊಬಗಿನ ನಗರ ಷೀರಾಸ್ ಕಾಂಬೆನೆಲ್ಲೀ ಚೆಲುವನು
ದಿನದ ಪ್ರಾರ್ಥನೆಯೆನತು ದೇವರ ದೇವ ಸಲಹಲಿ ನಾಡನು.—
ನೂರು ಬೇಡಿಕೆ; ಪಾಳು ಬೀಳದೊಲಿಡಲಿ ರುಕ್ನಾಬಾದನು
ದೇವಲೋಕದ ಖಿಸರಧಾರೆಯ ತೆರದ ಈ ಹೊಳೆದಡವನು.—
ಜಾಫರಾಬಾದ್, ನೆರೆಯ ಮುಸಲದ ತೋಟ ನಡುವಣ ಎಡೆಯೊಳು
ಪೇಳಲೇನುತ್ತರದ ಪರಿಮಳ ಬಂದು ಬೀಸುವ ಪರಿಯನು!—
ಇಳೆಯೊಡೆಯರಾತಿಥ್ಯವಿಲ್ಲದೆ ಬನ್ನಿ ಷೀರಾಸ್ ನಗರಕೆ
ಅರಸಿ ಕಾಂಬಿರಿ ಒಲುಮೆ ದೇವತೆಯೀವ ಶಾಂತಿಯ ವರವನು.—
ಮಿಸರ ದೇಶದ ಸವಿಯ ಸಕ್ಕರೆಗಿಲ್ಲವಿನ್ನಾ ಕಾಣಿಕೆ
ಎಮ್ಮ ಈ ಚೆಲುವೆಯರ ಪರಿಮಳವಳಿಸಿತದರಾ ಹೆಸರನು.––
ಉದಯಕಾಲದ ಗಾಳಿ ತಂದೆಯ ಹೇಳು? ಹುಡುಗಿಯ ಸುಳಿವನು
ಏನ ಬಲ್ಲೆಯೊ ಹೇಳು ಹೇಳಾ ಚೆಲುವೆಯೊಬ್ಬಳ ಪರಿಯನು.—

ಎಚ್ಚರಿಸದಿರು ಮೀಸಲಾದಾ ಕನಸಿನಿಂ ನೀನೆನ್ನನು
ಅವಳ ಧ್ಯಾನವೆ ನಲಿಸಿ ಒಲಿಸುವುದೊಂಟಿಯಾಗಿರಲೆನ್ನನು.—
ಬಟ್ಟಲನು ಹಿಡಿದಾಕೆ ಮಧುವೆಂದೆನ್ನ ರಕ್ತವ ಕೇಳಲು
ಅದುವೆ ಪಾವನ, ತಾಯ ಹಾಲಪೊಲದನು ನೀಡುವೆನೆರೆವೆನು.—
ಏಕೆ ಹಾಫಿಸ್ ವಿರಹದಂಜಿಕೆ ನಿನ್ನ ಬಾಧಿಸುತಿರುವುದು
ಒಡನೊಡನೆ ಇದ್ದಂದು ನುಡಿದೆಯ ಧನ್ಯವಾದವನೊಂದನು ?—

ಹಾಫಿಸ್ ಷೀರಾಸಿನವನು; ಆ ಪಟ್ಟಣವನ್ನು ಕುರಿತು ಹಾಡಿದ್ದಾನೆ; ಅದು ಅವನ ಪ್ರಿಯಳ ಆವಾಸ. ಅವನ ಊರಿನ ಹತ್ತಿರದ ರುಕ್ನಾಬಾದ್ ಹೊಳೆ ಅವನಿಗೆ ದೇವಲೋಕದ 'ಖಿಸರ್' ಹೊಳೆ. 'ಮುಸಲ'ದ ತೋಟ ಅವನಿಗೆ ಪ್ರಿಯವಾದ ಸ್ಥಳ. ಅವನ ಗೋರಿ ಅಲ್ಲಿಯೇ ಇದೆ. ಜಾಫರಾ ಬಾದು ಹಾಫಿಸನ ಕಾಲದಲ್ಲಿ ಅಲ್ಲಿಯೇ ಸಮೀಪದಲ್ಲಿದ್ದ ಅಗ್ರಹಾರ. ಮಿಸರ ದೇಶವೆಂದರೆ ಈಜಿಪ್ಟ್.

ಹಾಫಿಸನು ತನ್ನ ಪಟ್ಟಣದ ಒಂದು ಸುಖಮಯವಾದ ಸಮಯವನ್ನು ಕುರಿತು ಈ ಗಜಲನ್ನು ಹಾಡಿದ್ದಾನೆ. ಆದರೆ ಷೀರಾಸಿನಲ್ಲಿ ಅವನ ಕಾಲದಲ್ಲಿ ಸ್ಥಳದ ಅರಸರ ಅಂತಃಕಲಹಗಳಿಂದಲೂ, ನೆರೆಯರಸರ ದಾಳಿಗಳಿಂದಲೂ ಗೊಂದಲ ಇದ್ದೇ ಇರುತ್ತಿತ್ತು. ಪಟ್ಟಣದ ಮುಂದಿನ ದುರ್ದೆಶೆಯನ್ನು ಊಹಿಸಿಕೊಂಡೂ ಒಮ್ಮೊಮ್ಮೆ ಹಾಡುತ್ತಾನೆ. ಅದನ್ನು ಈ ಕೆಳಗಿನ ಗಜಲಿನಲ್ಲಿ ಕಾಣಬಹುದು.

೩

ಕವಿ ತನ್ನ ಊರಿನ ಒಂದು ದುರ್ದಶೆಯನ್ನು ಕುರಿತು ಹೀಗೆ ಹೇಳುತ್ತಾನೆ:

ಏನು ಆ ಚಂದಿರನ ಸುತ್ತುಲು ಗಗನದೊಳಗೀ ಅಬ್ಬರ
ಏನು ಕೇಳಿಕೆ ಏನು ಹೇಳಿಕೆ ತುಂಬು ಸಂದಣಿ ಈತೆರ.—
ಒಳ್ಳೆ ದಿನವನು ಕೊಡಲು ಕಾಲನನೆಲ್ಲ ಮಂದಿಯು ಕೇಳ್ವರು
ದಿನಕೆ ದಿನವೇತಕ್ಕೊ ಕಾಣೆನು ಎನಗೆ ಕಾಂಬುದು ಕಟುತರ.—

ಎಲ್ಲ ಕುಡಿತವು ಹೂವು ಸಕ್ಕರೆಯಿಂದ– ಅರಿಯದ ಮುಂದಿಗೆ
ಹೃದಯುರಕುತವ ಹೀರಿಯಾದುದು ನೋಡೆ, ಬಲ ಮತಿವಂತರ.—
ಗಾಸಿಯಾಯಿತು ಅರಬಿ ಕುದುರೆಗೆ ಆವ ಕಟ್ಟಿನ ಗಾಯವೊ !
ಕತ್ತೆಯಾ ಕುತ್ತಿಗೆಗೆ ಮೀಸಲು ಬೆಳ್ಳಿ ಪಟ್ಟಿಯು ಆದರ.—
ಹೆಣ್ಣುಮಕ್ಕಳು ತಮ್ಮ ತಾಯೊಡನಿಲ್ಲಿ ಜಗಳವ ಮಾಳ್ಪರು
ಗಂಡುಮಕ್ಕಳಿಗಿಲ್ಲ, ತಂದೆಯು ಬಯ್ದುಕೊಂಡಿರೆ ಬೇಸರ.—
ಅಣ್ಣತಮ್ಮದಿರಲ್ಲಿ ಅಂತಃಕರಣವಿರುವುದ ಕಾಣೆನು
ಕಾಣೆ ಮಗನಿಗೆ ತಂದೆಯೆಂಬನ ಮನದಿ ಪ್ರೀತಿಯ ಆಗರ.—
ಹಾಫಿಸನ ನೀತಿಯನು ಕೇಳೆಲೆ ಹಿರಿಯ ಒಳಿತನು ಗೆಯ್ಯಿ ನೀಂ
ನೀತಿಯಿದುವೇ ಮೇಲು–ಏತಕೆ ಮುತ್ತು ರತ್ನಗಳಬ್ಬರ ?—

೪

ಕಡೆಯಲ್ಲಿ ಬರುವುದೆಂದು ನಂಬಿಕೆಯಿರುವ ನ್ಯಾಯದ ವೇಳೆಯನ್ನು ಕುರಿತು ಹೇಳಿದುದು ಈ ಪದ್ಯವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ:—ಒಳ್ಳೆಯ ಕಾಲ ಬರುವುದೆಂದು ಕವಿಯ ನಂಬುಗೆ.

ಬರುವ ಕಾನಾನಿಂದೆ ಯೂಸೊಫ್ ಮರುಗಬೇಡೆಲೆ ಹೃದಯವೇ
ಬೆಂದ ಬಯಲದು ನಾಳೆಯಹುದುದ್ಯಾನ ಅಳದಿರು ಹೃದಯವೇ.—
ಇಂದು ಮುತ್ತಿದ ನೋವು ತರುವುದು ನಾಳೆ ಸುಖವನು ಸ್ಥೈರಿಸು
ಶಾಂತಿಯುಂಟಾ ಮಿದುಳ ಹುಚ್ಚಿಗೆ ; ತಡೆದು ನೋಡೆಲೆ ಹೃದಯವೆ.—
ತಿರುಗುತಿರುವುದು ಕಾಲ ; ಮುಟ್ಟಿತೆ ನಮ್ಮ ಆಶೆಯು ಕೊನೆಯನು ?
ಇರಲು ಆರದು ಇದುವೆ ಎಂದಿಗು ಕೊರಗು ಏತಕೆ ಹೃದಯವೆ?—
ಬರೆ ವಸಂತವು ಮತ್ತೆ ಹಸುರನು ಬಿತ್ತಿ ಬೆಳಸುತ ವನದೊಳು
ಅಳಲದಿರು ಎಲೆ ಹಕ್ಕಿ ಬಯಸಿದ ಹೂವ ರಾಸಿಯ ಕಾಣುವೆ.—
ಬೇಡ ನಿನಗೆ ನಿರಾಶೆ ದೈವದ ಗುಟ್ಟು ತಿಳಿಯದು ಎನ್ನುತೆ
ತೆರೆಯ ಮರೆಯೊಳು ಪ್ರೇಮ ಬೆಳಗಿದೆ ಅಳಲದಿರು ನೀ ಹೃದಯವೆ.—

ಶಾಂತಿ ದೊರೆಯದೆ ತಿರುಗಿ ತಿರುಗಿದುದಾಯ್ತು ಏನೀ ರೀತಿಯು
ದೈವ ಶಾಂತಿಯ ಕೊಡದೆ ತಡೆಯದು ಭ್ರಮಿಸಬೇಡೆಲೆ
ಹೃದಯವೆ.—
ಕಾಬಕಾಗೀ ಕಾಡ ತುಳಿವೆಲೆ ಜೀವ, ಮಾತನು ಲಾಲಿಸು
ತುಳಿದ ಮುಳ್ಳುಗಳೆಲ್ಲ ಬಿಡುವವು ಹೂವ; ನೀನೇ ಕಾಣುವೆ.—
ಸಾವುನೋವಿನ ಕಡಲು ಹರಿಯಲಿ ಉಬ್ಬಿ ಜೀವದ ಸುತ್ತಲೂ
ನೋಹ ನಡಸುವ ಹಡಗ; ಹೆದರಿಕೆ ಬೇಡ ದಡವನು ಸೇರುವೆ.—
ದಾರಿ ಭೀಕರ, ಮುಟ್ಟಬೇಕೆಂದಿರುವ ಗುರಿ ಬಹುದೂರವು
ಎಲ್ಲ ದಾರಿಗಳಲ್ಲಿಗೊಯ್ಯುವು ಚಿಂತೆ ಬೇಡೆಲೆ ಹೃದಯವೆ.—
ಮನೆಮಠದ ದುಃಖಗಳು ಕಾರ್ಗತ್ತಲೆಯು ಬಡತನವೆಂಬಿವು
ಉಂಟೆ ಹಾಫಿಸ್ ತೆರೆ ಕುರಾನನು ಸುಮ್ಮನೇತಕೆ ನಡುಗುವೆ ?—

ಕಾಬ ಮಕ್ಕಾದಲ್ಲಿರುವ ಮುಸಲ್ಮಾನರ ಪೂಜಾಸ್ಥಳ. ಈ ಪದ್ಯದಲ್ಲಿ ಕವಿ ತನಗೆ ಕುರಾನಿನಲ್ಲಿರುವ ನಂಬಿಕೆಯನ್ನು ವ್ಯಕ್ತಪಡಿಸುತ್ತಾನೆ. ಆ ಗ್ರಂಥವನ್ನು ಆಮೂಲಾಗ್ರವಾಗಿ ಬಾಯಿಪಾಠ ಹೇಳಬಲ್ಲವನಾಗಿದ್ದುದರಿಂದಲೆ ಅವನಿಗೆ ಹಾಫಿಸ್ ಎಂಬ ಹೆಸರು ಬಂದದ್ದು. ಯೂಸೊಫನನ್ನು ಅವನ ಸಹೋದರರು ಕಾನಾನ ಬಾವಿಯಲ್ಲಿ ಹಾಕಿದ್ದು ಮತ್ತು ನೋಹಾ ಪ್ರಳಯದಲ್ಲಿ ಹಡಗನ್ನು ನಡಸಿಕೊಂಡು ದಡ ಸೇರಿದ್ದು ಈ ಕತೆಗಳನ್ನು ಈ ಪದ್ಯದಲ್ಲಿ ಸಾಮತಿಯಾಗಿ ಸೂಚಿಸಿದೆ.

೫

ಬೆಳಗಿಸೆನ್ನೀಬಟ್ಟಲನು ಎಲೆ ಸಾಕಿ ಮಧುವನು ತುಂಬಿಸಿ
ಹಾಡುಗಾರನೆ ಹಾಡು ಜಗದೊಲುಮೆಗಳನೆನ್ನೊಡಗೂಡಿಸಿ.—
ಮಧುವ ಸವಿದಾ ರುಚಿಯನರಿಯದ ನೀವು ಏನನು ಬಲ್ಲಿರಿ
ಸವಿವ ಮಧುವಲಿ ಬಟ್ಟಲಂಚಲಿ ಕಾಣುತಿರುವಳು ಪ್ರೇಯಸಿ
ಬಳುಕು ಚೆಲುವೆಯರೆನಗೆ ತೋರುವ ಮಮತೆಗಳ ನೀವ್
ಹಳಿವಿರೇಂ

ಬರುವಳದಿಗೋ ಸಂಪಿಗೆಯವೋಲ್ ಘಮಿಸುತೊಬ್ಬಳು
ಪ್ರೇಯಸಿ —
ಪ್ರೇಮವಿತ್ತಾ ಜೀವ ತಾಳ್ದಗೆ ಸಾವದಿಲ್ಲವು ಕೇಳಿರಿ
ಜಗದ ಹೊತ್ತಗೆಯಲ್ಲಿ ಅಳಿಸದ ಪ್ರೇಮ ಕತೆಯಿದನಾಲಿಸಿ.—
ಮಧುವ ಕುಡಿದಾ ಭಾವ ಗೆಳೆಯರ ಕಣ್ಣ ಹೊಳಪಲಿ ಕಾಂಬುದು
ಕುಡಿದು ಕೈಯನು ಸಡಿಲಬಿಟ್ಟಿಹೆವೆಮ್ಮ ಕುದುರೆಗಳೋಡಿಸಿ.—
ವ್ರತದ ಉಣಿಸಿನ ಲಾಭ ಎಣಿಕೆಯ ದಿನದೊಳೇನುಂಟರಿಯೆನು
ಅಂದು ನೂಕದು ನಮ್ಮ ಕುಡಿತವು ಇಂದು ನಮ್ಮನು ನಂಬಿಸಿ.—
ನಮ್ಮ ಈ ತೋಟದಲಿ ಬೀಸುವ ಗಾಳಿ, ಬೇಡುವೆ ನಿನ್ನನು
ಒಯ್ಯಬೇಕೀ ನಮ್ಮ ಅರಿಕೆಯ ಗೆಳೆಯನೆಡೆಗಿದ ಕರುಣಿಸಿ.—
ಕೇಳು ಎನ್ನನು ಮರೆತನೇತಕೆ ಆತನೆಂಬುದ, ಗಾಳಿಯೆ
ಆರು ನೆನೆಯದ ದಿನವು ಬರುತಿಹದೊಂದನಾತಗೆ ಜ್ಞಾಪಿಸಿ.—
ಇರುಳು ಚಳಿಗಾ ಎನ್ನ ಹೃದಯದ ಹೂವು ಸಿಕ್ಕಿದ ತೆರದೊಳು
ಎನ್ನ ತೋಟದಿ ಶುಭದ ಹಕ್ಕಿಯೆ ನಿನ್ನ ಕಾಂಬೆನೆ ಸಿಕ್ಕಿಸಿ.—
ನೀಲವಿಶ್ವದ ಕಡಲು ಇದರೊಳು ಸಣ್ಣ ಚಂದ್ರನ ನಾವೆಯು
ಹೋದವೆರಡೂ ಕಲಿ ಕವಾಮನ ದಾನ ಜ್ಯೋತಿಗೆ ಕ್ಷೀಣಿಸಿ.—
ನಿನ್ನ ಕಣ್ಣಿನ ಹನಿಯು, ಹಾಫಿಸ್, ಧಾನ್ಯದಂದದಿ ಸುತ್ತಲೂ
ಎರಚು, ಹಿಡಿ ಸಂತಸದ ಹಕ್ಕಿಯ ಪ್ರೇಮಬಲೆಯನು ಹರಡಿಸಿ.—

ಈ ಪದ್ಯದಲ್ಲಿ 'ಕವಾಮ' ಎಂಬ ಹೆಸರು ಬಂದಿದೆ. ಈತನೇ ಹಾಫಿಸನು ಪಾಠ ಪ್ರವಚನಗಳನ್ನು ನಡಸಿಕೊಂಡಿರಲೆಂದು ಷೀರಾಸಿನಲ್ಲಿ ಒಂದು ಪಾಠಶಾಲೆಯನ್ನು ಕಟ್ಟಿಸಿಕೊಟ್ಟ ಕವಾಮುದ್ದೀನನು; ಬಾಗ್ದಾದಿನ ಅರಸರ ಬಳಿಯ ಮಂತ್ರಿ. ಸಂಪಿಗೆಯವೋಲ್ .... ಪ್ರೇಯಸಿ:— ಒಂದು ಠೀವಿಯ ನಿಲವು, ಔನ್ನತ್ಯ, ಈ ಭಾವಗಳನ್ನು ಪ್ರಿಯಳಲ್ಲಿ ತೋರಿಸಲು ಪಾರಸಿಯಲ್ಲಿ 'ಸರೋ' ವೃಕ್ಷದ ಸಾಮ್ಯವಿದೆ. ಕನ್ನಡದ ಮನಸ್ಸಿಗೆ ಹಿಡಿಯುವುದಕ್ಕೆ ಇಲ್ಲಿ ಸಂಪಿಗೆಯ ಸಾಮ್ಯವನ್ನು ಹೇಳಿದೆ.

೬

ಹಿಡಿಯಲಾ ಷೀರಾಸ ತರ್ಕೀ ಚೆಲುವೆಯೆನ್ನಯ ಮನವನು
ತೋರಿ ಎನಗಾ ಮೊಗದ ಸೊಬಗಿನ ಹೊಳೆವ ಚುಕ್ಕೆಯ-
ನೊಂದನು —
ಒಂದು ಚುಕ್ಕೆಯ ಸೊಗಸು ಸಾಕೆನಗೊಡನೆ ಅದಕಾಗೀವೆನು
ಬೇಡಲಿ ಸಮರ್ಕಂದ್ ಬೊಕಾರೆಗಳೆಂಬ ನಗರಗಳೆರಡನೂ.—
ಉಳಿದ ಮಧುವನು ನೀಡು ಗೆಳೆಯ, ಕಾಣೆ ನಿನ್ನಾ ಸಗ್ಗದಿ
ಮುಸಲದೊಂದುದ್ಯಾನವನು ಮೇಣ್ ರುಕ್ನೆಯಂದದ ನೀರನು.—
ಲೂಲಿ ಚೆಲುವೆಯರೇನು ಗಲಭೆಯನೆಬ್ಬಿಸಿಹರೀ ನಗರದಿ
ಕಸಿದುಕೊಂಡಿಹರೆನ್ನ ಸಹನೆಯ ಮೀರಿ ತರ್ಕರ ಹವಣನು.—
ಚೆಲುವೆ ಶೃಂಗಾರದಲಿ ಒಪ್ಪುವಳಾನು ಬಡವನು ಅರಿಯಲು
ಕೊಡುವುದೇಂ ಮೇಣ್ ಸಹಜ ಸೊಬಗದು ಮತ್ತೆ
ಬೇಡುವುದೇನನು ?
ಗಾನದಲಿ ಯೂಸೊಫನ ಚೆಲುವದು ಸುಳಿಯಲಾಗಲೆ ತಿಳಿದೆನು
ಪ್ರೇಮ ತೆರೆಯನು ಬಿಡಿಸಿ ಸೆಳೆದೊಯ್ದಿತು ಜುಲೈಖಳ
ಮನವನು.—
ಮಧುವು ಗೀತೆಯು ಕಥೆಗಳೆಲ್ಲವು ಸಾರಿ ಹೇಳುತಲಿರುವುವು
ಅರಿಯಲಾಗದು ಗುಟ್ಟನೆಂದಿಗು ತೆರೆದು ದೈವದ ಕದವನು.—
ಬುದ್ಧಿಯಾ ಮಾತುಗಳ ಕೇಳೆಲೆ ಚೆಲುವೆ ಒಳಿತನು ಲಾಲಿಸು
ಇರಲು ಮಾರ್ಗದ ಆಸೆ ಕಿರಿಯರು ಬಿಡರು ಹಿರಿಯರ ಮಾತನು.—
ಬಯ್ದೆಯಾದೊಡೆ ನನ್ನನೊಳಿತೈ ಕ್ಷಮಿಸು ದೇವನೆ ಎಂದೆನು
ಸಕ್ಕರೆಯ ಬಾಯ್ ಏನೆ ನುಡಿಯಲಿ ಕಹಿಯನದರೊಳು
ಕಾಣೆನು.—
ಗಜಲ ಹಾಡಿದೆ ಮುತ್ತ ಪೋಣಿಸಿ ಹಾಡು ಹಾಫಿಸ್ ಹಾಗೆಯೆ
ತಾರೆಗಳ ಮಾಲಿಕೆಯನೊಪ್ಪಿಸಿ ಗಗನ ಕೇಳಲಿ ಹಾಡನು.—

ತೈಮೂರ್ ದೊರೆ ಷೀರಾಸನ್ನು ಮೊದಲನೆಯ ಸಲ ಮುತ್ತಿದಾಗ
'ನೀನೇ ಅಲ್ಲವೆ ನಿನ್ನ ಪ್ರಿಯಳ ಮೊಗದ ಮೇಲಿನ ಚುಕ್ಕೆಯ ಚೆಲುವಿ

ಗಾಗಿ ನನ್ನ ರಾಜ್ಯದ ಎರಡು ನಗರಗಳನ್ನು ಕೊಟ್ಟವನು?' ಎಂದು ಹಾಫಿಸನನ್ನು ಕೇಳಿದನಂತೆ. ಅವನು 'ಹೌದು ಮಹಾಸ್ವಾಮಿ, ಅದಕ್ಕೇ ನಾನು ಈ ಬಡತನಕ್ಕಿಳಿದಿರುವುದು' ಎಂದು ಉತ್ತರಕೊಟ್ಟನಂತೆ. ದೊರೆಗೆ ನಗೆ ಬಂದು ಕವಿಗೆ ಮನ್ನಣೆಮಾಡಿದನೆಂದು ಹೇಳುತ್ತಾರೆ. ಲೂಲಿಗಳು ಹಾಫಿಸನ ಕಾಲದಲ್ಲಿ ಆ ದೇಶದಲ್ಲಿ ಊರಿಂದ ಊರಿಗೆ ತಿರುಗುತ್ತಿದ್ದ ಒಂದು ತಂಡದ ಜನಗಳು. ತರ್ಕರು ಸ್ಥಳದ ಜನರೊಡನೆ ಕ್ರೂರವಾಗಿ ವರ್ತಿಸುತ್ತಿದ್ದರು; ಆದುದರಿಂದ ಅವರ ಸಹನೆ ಕೆಡುತ್ತಿತ್ತು. ಲೂಲಿಗಳ ಚೆಲುವು ತರ್ಕರ ಕ್ರೌರ್ಯಕ್ಕಿಂತ ಮಿಗಿಲಾಗಿ ಸಹನೆಯನ್ನು ಕೆಡಿಸುತ್ತಿತ್ತು ಎಂದು ಕವಿ ಹೇಳುತ್ತಾನೆ. ಜುಲ್ಯೆಖಳಿಗೆ ಯೂಸೊಫನ ಮೇಲೆ ಪ್ರೇಮವಂಕುರಿಸಿದ ಕಥೆಯನ್ನು ಇಲ್ಲಿ ಸೂಚಿಸಿದೆ. ದೇವನಿಗಾಗಿ ಮನುಷ್ಯನ ಮನಸ್ಸು ಮೋಹಗೊಳ್ಳುತ್ತದೆ; ಆ ದೇವನು ಮನುಷ್ಯನಿಗೆ ಸುಲಭದಲ್ಲಿ ಸಿಕ್ಕದೆ ನೋವನ್ನು ಕೊಟ್ಟು ಕ್ರೂರಿಯಾಗಿ ವರ್ತಿಸುತ್ತಾನೆ-- ಇದು ಸೂಫಿ ವರ್ಣನೆಗಳಲ್ಲಿ ಸಾಮಾನ್ಯವಾಗಿ ಬರುವ ಒಂದು ಭಾವನೆ.

೭

ತನ್ನ ಪ್ರಿಯಳಿರುವ ಸ್ಥಳಕ್ಕೇ ಕಳಿಸುವುದಾಗಿ ಕವಿ ಬೆಳಗಿನ ಗಾಳಿಗೆ ಹೇಳುತ್ತಾನೆ.

ಎಲೆ ಪ್ರಭಾತದ ಗಾಳಿ ಪ್ರಿಯಳೆಡೆ ನಿನ್ನ ಸಾಬೆಗೆ ಕಳುಹುವೆ
ಭ್ರಾಂತಿ ಬೇಡೆಲೆ ಗಾಳಿ–ದೂರವೆ?– ದಿಕ್ಕಹಿಡಿದೇ ಹಾರುವೆ.—
ಕಾದ ದೂಳಲಿ ರೆಕ್ಕೆಯುಡುಗುವುದೆಂಬ ಭೀತಿಯ ನಿಲ್ಲಿಸು
ಕಳುಹೆ ಬೇರೆಡೆ ನಂಬಿಕೆಯೊಳಿಹ ಗೆಳೆಯೆಳೆಡೆಗೇ ಕಳುಹುವೆ.—
ದೂರವೋ ಹತ್ತಿರವೊ ಪ್ರೇಮದ ಹಾದಿಯಲಿ ನಿಲಲಾಗದು
ಬಳಿಯೊಳಿಲ್ಲದ ಮೊಗವದೆಲ್ಲಿಹುದಲ್ಲಿ ಪ್ರಾರ್ಥನೆ ಕಳುಹುವೆ —
ಬೆಳಕು ಹರಿಯಲು ಸಂಜೆಯಾಗಲು ಎನ್ನ ಒಳ್ನುಡಿ ಸೇವೆಯ
ಯಾವ ದಿಕ್ಕಿನ ಗಾಳಿ ಬರಲದರೊಡನೆ ಕೂಡಲೆ ಕಳುಹುವೆ.—
ನಿನ್ನ ಮೊಗದಲಿ ದೈವಚೆಲುವನು ಕಂಡೆನೆಂತೆಂದೆಂಬೆಯಾ
ನೋಡು ದೈವದ ಚೆಲುವ ತೋರುವ ಕನ್ನಡಿಯ ನಾ ಕಳುಹುವೆ.-

ಶೋಕದಾ ಸೈನ್ಯವನು ಕಳುಹಲು ಪ್ರೇಮರಾಜ್ಯಕೆ ಹೆದರುತ
ಶಾಂತಿಶಾಂತಿಗೆ ಮುಯ್ಯಾದಾಗಿರೆ ಜೀವದುಸಿರನೆ ಕಳುಹುವೆ.—
ಬಂದಿತಾದೊಡೆ ಸುಯ್ಯಿ ನಿನ್ನಯ ಬಳಿಗೆ ತಾಳದೆ ಬೇಗೆಯ
ಹೇಳು ಪ್ರೀತಿಯೊಳೊಮ್ಮೆ ಹಂಬಲವೆಸ್ತು ತದ ನಾ ಕೇಳುವೆ.—
ನಿನ್ನ ಕಣ್ಣಲಿ ಕಾಣೆನಾದರು ಮನದೊಳಿರುತಿಹೆ ಎಂದಿಗೂ
ಆವ ಪ್ರಾರ್ಥನೆ ಆವ ಹೊಗಳಿಕೆ ಹೇಳು ನಿನ್ನೆಡೆ ಕಳುಹುವೆ.—
ಹಾಡುಗಾರರು ಎನ್ನ ಹಂಬಲ ನಿನಗೆ ಹೇಳಿದರಾಗಲೆ
ಸುಮ್ಮನೆಂತಿರಲಹುದು ನಾನೂ ಗಜಲ ನುಡಿಗಳ ಕಳುಹುವೆ.—
ಸಾಕಿ ನೀಡ್ಯೆ ಮಧುವ ದೈವದ ವಾಣಿ ಹೇಳಿಪೆ ಕಿವಿಯಲಿ
ನೋವ ಸೈರಿಸು ಅಯ್ಯ ಔಷಧಿ ನಿನಗೆ ಈಗಲೆ ಕಳುಹುವೆ.—
ನಮ್ಮ ಸಭೆಯಲಿ ಎಲ್ಲ ನಿನ್ನಯ ಮಾತೆ ಹಾಫಿಸ್ ಈ ದಿನ
ಗೆಳೆಯ ಬಾರಾ ಬೇಗ ಕಾಣಿಕೆ ಕುದುರೆಯೊಡನೆಯೆ ಕಳುಹುವೆ.—

ಸಾಲೊಮನ್ ದೊರೆ ಷೇಬ ರಾಣಿಗೆ ಹೇಳಿಕಳುಹಿಸಿದ ಕತೆಯನ್ನು ಕವಿ ಉಪಯೋಗಿಸಿಕೊಂಡಿದ್ದಾನೆ. ತನ್ನ ಹೃದಯವನ್ನೇ ದೈವದ ಚೆಲುವ ತೋರುವ ಕನ್ನಡಿ ಎಂದು ಹೇಳುತ್ತಾನೆ. ಮಾನ್ಯರನ್ನು ಬರಮಾಡಿಕೊಳ್ಳಲು ಕಾಣಿಕೆ ಕುದುರೆಗಳನ್ನು ಕಳಿಸುತ್ತಿದ್ದುದು ಹಿಂದಿನ ಮರ್ಯಾದೆ.

೮

ಪ್ರೇಮ ಸಾವು ಜೀವಕ್ಕಿಂತ ಆಳವಾದದ್ದು.

ಹಕ್ಕಿ ಮುಂಜಾನೆಯಲಿ ಅರಳಿದ ಹೂವ ಕುರಿತಿಂತೆಂದಿತು
ಸಾಕು ನಿನ್ನಾ ಬಿಂಕ ಹೂವಿಲ್ಲೆಷ್ಟೊ ಹುಟ್ಟಿತು ಸತ್ತಿತು.—
ನಕ್ಕು ಆಡಿತು ಹೂವು ಸತ್ಯಕೆ ದುಃಖವೇತಕೆ ಸುಮ್ಮನೆ
ಪ್ರೇಮಿಗಳ ಮಾತೆಂದು ಕರೆಯಲು ನೋಡು ಇದು
ಕಟುವಾಯಿತು.—
ಕುಡಿವೆಯಾದೊಡೆ ಕೆಂಪು ಹರಳಿನ ಬಣ್ಣಕಿರುವಾ ರಸವನು
ಕಣ್ಣ ಸುತ್ತಲು ಹನಿಯ ಕೆಂಪನು ಪೋಣಿಸಲು ಬೇಕಾಯಿತು.—

ಅಂಗಡಿಯು ಹೊಸ್ತಿಲಲಿ ಮಣ್ಣಾಗದಿರೆ ಪ್ರೈಯುದು ತಿಳಿಯುಲು
ಪ್ರೇಮವೆನ್ನುವ ಗುಟ್ಟು ಎಂದಿಗು ದೂರವವನಿಂದಾಯಿತು.—
ನಿನ್ನೆ ಅರಮದ ತೋಟ ಮಲಗಿದ್'ವೇಳೆ ಹಸುರಿನ ತಂಪಲಿ
ಹುಲ್ಲು ಹಸುರಿನ ಕುರುಳ ಸವರುತ ಮಂದಮಾರುತ ಬೀಸಿತು —
ಜಮ್ಷಿದನ ಹಾಸಿಗೆಯೆ ಬಟ್ಟಲ ಒಲುಮೆ ಎಲ್ಲಿಹುದೆಂದೆನು
ಎದ್ದು ಆಡದ ಭಾಗ್ಯ ನೆನೆದಾ ಗಾಳಿ ಬಲು ಬಿಸುಸುಯಿದ್ದಿತು.—
ನಾಲಗೆಯ ಕೊನೆಯಲ್ಲಿ ಕಾಂಬುದು ಮಾತು ಪ್ರೇಮವದಲ್ಲವು
ಮಧುವ ನೀಡೆಲೆ ಸಾಕಿ ಒಣಮಾತಿದುವೆ ಬಿಡು ಸಾಕಾಯಿತು —
ಸಹನೆ ಹಾಫಿಸ್ ಮುಳುಗಿಹೋಯಿತು ನಿನ್ನ ಕಂಬನಿಗಡಲಲಿ
ಅಡಗದಾಯಿತು ನಿನ್ನ ನೋವದು ಆತುರದ ಕಣ್ ಕಂಡಿತು —

೯

ಕವಿ ತನ್ನ ಹುಡುಗ ಹೋದುದನ್ನು ಸ್ಮರಿಸಿಕೊಂಡು ಈ ಪದ್ಯವನ್ನು ಬರೆದಿದ್ದಾನೆ.

ಹೃದಯ ರಕ್ತವ ಹಿಂಡಿ ಬುಲ್ಬುಲ್ ಹೂವನೊಂದನು ಸಾಕಿತು
ಗಾಳಿ ಪೊದೆಯನು ಹಿಡಿದು ಅಲುಗಿಸಿ ನೂರು ಮುಳ್ಳಲಿ ಸುತ್ತಿತು.—
ಸಂತಸದ ಮನ ಸಕ್ಕರೆಯ ಸವಿಯನ್ನುಂಡ ಗಿಳಿಯಾಗಿದ್ದಿತು
ಇರಲು ಸಾವಿನ ಗಾಳಿ ಬೀಸಿತು ಎಲ್ಲ ಆಶೆಯನೊಯ್ದಿತು.—
ಕಣ್ಣಬೆಳಕೋ ಕರುಳ ಬೆಳೆಯೋ ನೆನಪನದನೇವೇಳ್ವೆನು
ಸುಲಭವಾಯಿತು ಪಯಣವವನಿಗೆ ಕಠಿಣವಿಲ್ಲೆನಗಾಯಿತು.—
ಒಂಟಿಯಾತನೆ ಹೊರೆಯನೆತ್ತಲು ಕೈಯ ಹಿಡಿ ನೀನೆನ್ನನು
ಕರುಣೆ ಜೊತೆಯೊಳು ಬರುವ ಆಸೆಯೆ ಎನ್ನನಿಲ್ಲಿಗೆ ತಂದಿತು.—
ದೂಳು ಮುಸುಕಿದ ಮೊಗವು ಒದ್ದೆಯ ಕಣ್ಣು ಇರಲೇನೆನ್ನೊಳು
ರನ್ನ ನೀಲಿಯ ಲೋಕವಿವನೇ ತನ್ನ ಕೆಲಸಕೆ ಕರೆದಿತು.—
ದೂಳು ಮಣ್ಣನು ಕಣ್ಣಕಂಬನಿಯಿಂದೆ ಕಲಸಿತು ನೆಟ್ಟನೆ
ಇಂತು ಮಣ್ಣಿನ ಮಾಟದಿಂದಲೆ ನಲ್ಮೆ ಕಟ್ಟಡ ಕಟ್ಟಿತು.—

ಅಯ್ಯೋ ಮತ್ತಾ ಚಂದ್ರ ಸೂರ್ಯರಸೂಯೆಯಿಂದಲೆ ನೋಡಲು
ಎನ್ನ ಸೊಬಗಿನ ಕಣ್ಣ ಚಂದ್ರಮ ಹೋದುದಿಲ್ಲಂದಾಯಿತು —
ಮಾಳ್ಪ ಕಾರ್ಯಗಳಿದ್ದ ಹಾಗೆಯೆ ಆಶೆ ಹಾಫಿಸ್ ಮುಗಿದಿತು
ಮಾಳ್ಪನೇನಾ ಕಾಲವೆನ್ನನು ಆಡುತಾಡುತ ಮರಸಿತು —

೧೦

ಪ್ರೇಮಿಗೆ ನಂಬಿದರ ನಾಸ್ತಿಕರ ಮಾತು ಬೇಡ.

ಪ್ರೇಮಿಯಾಗಿಹೆ ನಂಬಿದರ ನಾಸ್ತಿಕರ ಮಾತೆನಗೇತಕೆ ?
ನೋವ ಬಯಸಿಹೆ ಕೂಡಿಕೆಯು ಅಗಲಿಕೆಯು ಮಾತುಗಳೇತಕೆ?—
ಪ್ರೇಮ ವಸ್ತುವ ತುಟಿಯು ಮುಟ್ಟಲು ಜೀವವೆಂಬುದು ಮರೆತುದು
ಎನ್ನ ಜೀವವೊ ಪ್ರೇಮದಾಟವೊ ಆಗುಹೋಗುಗಳೇತಕೆ?—
ಒಲವು ಕೊಂದಿಹ ಪ್ರಾಣಿಯೆನ್ನಯ ಸುತ್ತ ತಿರುಗಲಿ ಲೋಕವು
ಒಬ್ಬನೇ ಇಹೆನೆಂಬೆ ಬಹು ಸಂದಣಿಯ ಮಾತೆನಗೇತಕೆ?—
ಆಲಯದ ಮಂಟಪವು ಪ್ರೇಮದ ಮೊಗವು ಬೇರೆನಗೇತಕೆ
ಹುಚ್ಚು ಹಿಡಿದೀ ಮನಕೆ ಇದು ಅದು ಎಂಬ ಮಾತುಗಳೇತಕೆ?—
ಪ್ರೇಮದಾ ಗುರಿಯೊಂದು ಇರುತಿರಲೆರಡು ಲೋಕಗಳೆಡೆಯಲಿ
ದೇವ ಮಾನವ ಸ್ವರ್ಗ ನರಕಗಳೆಂಬ ಮಾತುಗಳೇತಕೆ?—
ಪ್ರೇಮ ಮಾರ್ಗದಿ ತನ್ನ ತಾನೇ ಮರೆತುಹೋದಾ ಜೀವಿಗೆ
ನೋವು ದುಃಖಗಳರಿವೆಯೇನೌಷಧಿಯ ಮಾತದು ಏತಕೆ?—
ರೂಪರೇಖೆಗಳೇನ ನೋಡುವೆ ಗುಣವನಲ್ಲವೆ ನೋಳ್ಪುದು
ಪ್ರೇಮಿಯರಸುವ ಪ್ರೇಮ ಮಹಲಿನ ಮಾಟವವನಿಗೆ ಏತಕೆ?—
ಪ್ರೇಮ ಪೂಜೆಯೊಳಿರುವೆಯಾದೊಡೆ ಮತ್ತೆ ಹಾಫಿಸ್ ಧ್ಯಾನಿಸು
ಪ್ರೇಮಿಯಾಗಿಹೆ ನಂಬಿದರ ನಾಸ್ತಿಕರ ಮಾತೆನಗೇತಕೆ?—

ಇದು ಹಾಫಿಸನು ತನ್ನನ್ನು ತಾನೇ ಕುರಿತು ಹೇಳಿಕೊಂಡಿರುವ ಮಾತು.

ಗಜಲ್ ಎಂದರೆ ಪ್ರೇಮ, ಯೌವನ ಮುಂತಾದ ವಿಷಯಗಳನ್ನು ಕುರಿತ ಪದ್ಯವೆಂಬ ಅರ್ಥ ಬಳಕೆಯಲ್ಲಿರುತ್ತದೆ. ಆದರೆ ನಿಜವಾಗಿ ಇದರ

ವಸ್ತುವೇನು ಎಂದು ತಿಳಿಯಲು ಸ್ವಲ್ಪ ವಿಮರ್ಶೆಮಾಡಬೇಕಾಗಬಹುದು. ಪದ್ಯರಚನೆಗಳನ್ನೆಲ್ಲ ಒಟ್ಟಿನಲ್ಲಿ ನೋಡಿದರೆ ಇತಿಹಾಸ ಕಥೆಗಳು ಮೊದಲಾದ ದೀರ್ಘವಾದ ಬರಹಗಳು, ವರ್ಣನಾ ಮತ್ತು ಭಾವಪ್ರಧಾನವಾದ ಚಿಕ್ಕಬರಹಗಳು, ಅರ್ಥವನ್ನೆಲ್ಲ ಒಂದು ಹಿಡಿಯಲ್ಲಿ ತೋರಿಸಲು ಯತ್ನಿಸುವ ಇನ್ನೂ ಚಿಕ್ಕಬರಹಗಳು ಈ ಗುಂಪುಗಳನ್ನು ಗುರುತಿಸಬಹುದು. ಕನ್ನಡದಲ್ಲಿ ರಗಳೆಗಳು, ಗೀತಗಳು, ತ್ರಿಪದಿಗಳು ಎಂದು ಬಗೆಗಳಿರುವ ಹಾಗೆ ಪಾರಸಿಯಲ್ಲಿ (೧) ಮಸ್ನವಿ, (೨) ಖಸೀದ, ಗಜಲು ಮೊದಲಾದ ಪದ್ಯಗಳು (೩) ರುಬಾಯಿಗಳು ಗೊತ್ತಿಗೆ ಬರುತ್ತವೆ. ಉದ್ದಕ್ಕೆ ಒಂದು ಕಥೆ ಹೇಳುವುದಕ್ಕೆ ಹೊರಟ ಬರಹದಲ್ಲಿ ಮಧ್ಯೆ ಭಾರತದಲ್ಲಿ ವಿದುರನೀತಿ ಬಂದ ಹಾಗೆ ನೀತಿಯ ಭಾಗ ಬರಬಹುದು. ಬರಬರುತ್ತ ನೀತಿಯ ಭಾಗ ಬೇರೆ ಗ್ರಂಥವಾಗಬಹುದು. ಹಾಗೆಯೇ ಷಾಹನಾಮಾ ಕಾವ್ಯವನ್ನು ಬರೆದ ಪದ್ಯದ ಧಾಟಿ ಮತ್ತೊಬ್ಬ ಕವಿಯ ಕೈಗೆ ಸಿಕ್ಕಿ ತತ್ವ ಗ್ರಂಥಗಳಿಗಾಗಿ ಉಪಯೋಗವಾಗುತ್ತದೆ. ಇಂತಹ ಗ್ರಂಥಗಳಿಗೆ ಹೊಂದಿದ ಹಾಗೆ ಬರುವ ಒಂದು ದೇವರ ಪ್ರಾರ್ಥನೆ, ಒಬ್ಬ ದೊರೆಯ ಹೊಗಳಿಕೆ, ಒಂದು ಭಾವನೆಯ ಪ್ರತಿಪಾದನೆ ಸಿಡಿದು ತಮಗೆ ತಾವೇ ಬೇರೆ ಪದ್ಯಗಳಾಗಿ ಪರಿಣಮಿಸಬಹುದು. ಆಮೇಲೆ ಒಂದು ಅನುಭವದ ಸಂಗ್ರಹ ಸರ್ವಜ್ಞ ಕವಿಯ ಕೈಗೆ ಸಿಕ್ಕಿ ತ್ರಿಪದಿಯಾದ ಹಾಗೆ ಉಮರನ ಕೈಗೆ ಸಿಕ್ಕಿ ರುಬಾಯಿ ಆಗಬಹುದು. ಈ ಪದ್ಯರೂಪಗಳೆಲ್ಲ ಬೇರೆ ಬೇರೆ ಕಾಲದವಾಗಲಿ, ಬೇರೆ ಬೇರೆ ಕವಿಗಳ ಪ್ರಯೋಗಗಳಾಗಲಿ ಅಲ್ಲ. ಮಸ್ನವಿ, ರುಬಾಯಿಗಳು, ಇತರ ಪದ್ಯಗಳು, ಎಲ್ಲವನ್ನೂ ಸಾದಿ ಬರೆದಿದ್ದಾನೆ. ಹಾಫಿಸನು ಗಜಲುಗಳನ್ನೂ ಬರೆದಿದ್ದಾನೆ, ರುಬಾಯಿಗಳನ್ನೂ ಬರೆದಿದ್ದಾನೆ. ಹಾಗೆ ಒಂದು ಗೀತೆಯ ಪ್ರಯೋಗಕ್ಕೆ ಕವಿಗಳು ಕೈಹಾಕಿದಾಗ ಮೊದಲು ಒಂದು ಹೊಗಳಿಕೆಯನ್ನೊ. ಒಂದು ತತ್ವವನ್ನೊ, ದುಃಖದ ಒಂದು ಪ್ರಸಂಗವನ್ನೊ ವಸ್ತುವಾಗಿಟ್ಟುಕೊಳ್ಳುವುದು ಮೊದಲು ಬಂದು, ಆಮೇಲೆ ಈ ಪದ್ಯಗಳಲ್ಲಿ ಬರುತ್ತಿದ್ದ ಒಂದು ಪ್ರೇಮ, ಒಂದು ವಸಂತ, ಒಂದು ಹಕ್ಕಿಯ ವರ್ಣನೆ ಕವಿಗೆ ತನ್ನದೇ ಆದ ಒಂದು ಸೊಬಗುಳ್ಳುದಾಗಿ ಕಂಡು, ಬೇರೆ ಪದ್ಯವಾಗಿ ಹೊರ

ಹೊಮ್ಮಿ ಗಜಲು ಎನ್ನಿಸಿಕೊಂಡಿದೆ ಎಂದು ಒಂದು ಅಭಿಪ್ರಾಯ. ಹಾಫಿಸನ ಕಾಲಕ್ಕೆ ಹಿಂದಿನ ಕವಿಗಳು ಪಾರಸಿಯಲ್ಲಿ ಗಜಲನ್ನು ಹೀಗೇ ಉತ್ಪತ್ತಿ ಮಾಡಿರಬೇಕೆಂದು ಮೌಲಾನಾ ಷಿಬ್ಲಿ ನುಮಾನಿಯವರು ಹೇಳುತ್ತಾರೆ.

ಇಷ್ಟಾದರೂ ಗಜಲಿನ ವಸ್ತುವೇನು? ಪ್ರೇಮವೆ? ತತ್ವವೆ? ಎಂಬುದು ಸ್ಪಷ್ಟವಾಗುವುದಿಲ್ಲ. ಷೂಜ ದೊರೆ 'ಅದೇನು, ಹೀಗೆ ಒಂದೇ ಗಜಲಿನಲ್ಲಿ ನಿನ್ನ ಪ್ರೇಯಸಿ, ನಿನ್ನ ದೇವರು, ನಿನ್ನ ಮತ, ನಿನ್ನ ಹಟ, ನಿನ್ನ ದುಃಖ ಎಲ್ಲವನ್ನೂ ಕುರಿತು ಹಾಡುತ್ತೀಯೆ?' ಎಂದು ಹಾಫಿಸನ್ನು ಕೇಳಿದನಂತೆ. ಗಜಲಿನ ವಿಷಯದಲ್ಲಿ ಆ ಪ್ರಶ್ನೆ ಬರತಕ್ಕದ್ದೆ. ಅದಕ್ಕೆ ಹಾಫಿಸ್ 'ಅದು ಹಾಗೆಯೇ' ಎಂದು ಉತ್ತರ ಹೇಳಿದನಂತೆ. ಉತ್ತರವೂ ಹೀಗೇ ಇರತಕ್ಕದ್ದೆ. ಹೀಗೆ ಒಂದು ಬಗೆಯ ಸ್ವತಂತ್ರತೆಯ ಮನೋಭಾವವೇ ಕುರುಡುನಂಬಿಕೆಯನ್ನು ಆಧಾರವಾಗಿಟ್ಟುಕೊಂಡು ನಡೆಯುತ್ತಿದ್ದ ಸಂಪ್ರದಾಯ ಶರಣರನ್ನು ಹಳಿಯಲು, ಹಾಸ್ಯಮಾಡಲು ಕಾರಣವಾಗಿರಬೇಕು. ಈ ಒಂದು ಮನೋಭಾವ ಉಮರಖಯಾಮನಲ್ಲಿ ಕಾಣುವುದಕ್ಕೆ ಪ್ರಾರಂಭವಾದುದು, ಅವನಾದ ಮೇಲೆ ಬಂದ ಸಾದಿಯ ಮಾತಿನಲ್ಲಿ ಎದ್ದು ಕಂಡು, ಹಾಫಿಸನಲ್ಲಿ ಇನ್ನೂ ಮುಂದುವರಿದಿರುತ್ತದೆ. ಇವನಿಗೆ ಸೂಫಿ ತತ್ವಗಳನ್ನು ಉಪದೇಶಿಸಿದ ಷೇಕ್ ಮಹಮ್ಮದ್ ಅತ್ತಾರನು ಪ್ರಪಂಚವನ್ನೆಲ್ಲ ಬಿಟ್ಟು ಕೇವಲ ಸನ್ಯಾಸಿಯಾಗಿದ್ದವನಲ್ಲವೆಂದೂ ಶಿಷ್ಯನ ಮನಸ್ಸನ್ನು ಲೋಕದ ಸೊಗಸಿನ ಕಡೆಗೆ ತಿರುಗಿಸಿ ಉಪಕಾರ ಮಾಡಿದನೆಂದೂ ಅಭಿಪ್ರಾಯವಿದೆ. ಮತಾಭಿಪ್ರಾಯದ ಕಟ್ಟುಗಳಿಗಿಂತಲೂ ಕಾವ್ಯದ ಕಡೆಗೆ ಅವನ ಮನಸ್ಸು ಹೇಗೆ ಒಲಿಯುತ್ತಿತ್ತು, ಇನ್ನೂ ಹಲಕೆಲವರು ಹಾಫಿಸನಿಗೆ ಈ ವಿಷಯದಲ್ಲಿ ಹೇಗೆ ಸಹಾಯವಾಗುತ್ತಿದ್ದರು ಎಂಬುದಕ್ಕೆ ಇನ್ನೊಂದು ಉದಾಹರಣೆಯನ್ನು ಹೇಳಬಹುದು. ಬರಹಗಳ ವಿಚಾರದಲ್ಲಿ ಷೂಜ ದೊರೆಯೊಂದಿಗೆ ಭಿನ್ನಾಭಿಪ್ರಾಯ ಒದಗಿದಾಗ ಒಮ್ಮೆ ಹಾಫಿಸನ ಒಂದು ಸಾಲು ಅವನನ್ನು ಮತಬಾಹಿರನೆಂಬ ಅಪವಾದಕ್ಕೆ ಗುರಿಪಡಿಸುವಂತೆ ಇತ್ತು. ಆ ಸಾಲು 'ಮುಸ್ಲಿಮನ ಮತವಾವುದದು ಹಾಫಿಸನ ಮತವೇ ಆಗಿರೆ-

ನ್ಯಾಯವಿಹುದೇನಿಂದಿನಾ ಮೇಲೊಂದು ನಾಳೆಯು ಬಂದರೆ' ಎಂದಿತ್ತು. ಅಪವಾದಕ್ಕೇನು ಮಾಡಬೇಕೆಂದು ಹಾಫಿಸನು ಜೈನುದ್ದೀನ ಅಬೂ ಬಕರ್ ಎಂಬ ಗುರುವನ್ನು ಕೇಳಿದನಂತೆ. ಅಭಿಪ್ರಾಯ ಇನ್ನೊಬ್ಬರ ದೆಂದು ಹೇಳಿದರಾಯಿತು ಎಂದು ಆತನು ಸೂಚಿಸಿದನಂತೆ. ಆಮೇಲೆ ಇನ್ನೊಂದು ಸಾಲನ್ನು ಸೇರಿಸಲು ಪದ್ಯ ಹೀಗಾಯಿತು: 'ಏಸುಕ್ರಿಸ್ತನ ಭಕ್ತನಂಗಡಿ ಮುಂದೆ ಹಾಡಿದನೀಪರಿ- ನುಡಿಯು ಮುಂಜಾನೆಯಲಿ ಕೇಳಿದೆ ಗಾನ ಮನವನು ಸೆಳೆದಿರೆ। ಮುಸ್ಲಿಮನ ಮತವಾವುದದು ಹಾಫಿಸನ ಮತವೇ ಆಗಿರೆ- ನ್ಯಾಯವಿಹುದೇನಿಂದಿನಾ ಮೇಲೊಂದು ನಾಳೆಯು ಬಂದರೆ?' ಹಾಡು ಹೇಳಿದ್ದಾಯಿತು, ಅಭಿಪ್ರಾಯ ತನ್ನದಲ್ಲ, ಒಬ್ಬ ಕ್ರೈಸ್ತನದೆಂದು ಸೂಚಿಸಿದ್ದಾಯಿತು!

ಹಾಫಿಸನಿಗಿಂತಲೂ ಮೊದಲು ಹಲವರು ಗಜಲುಗಳನ್ನು ಬರೆಯಲು ಪ್ರಾರಂಭಿಸಿದ್ದರು. ಈ ಭಾಗದಲ್ಲಿ ಒಂದು ಮಾರ್ಗ ಬೀಳುವಂತೆ ಮೊದಲು ಪ್ರಯೋಗ ನಡಸಿದವನು ಸಾದಿ ಎನ್ನಬಹುದು. ಇದಕ್ಕೆ ಹೆಚ್ಚು ಮೆರುಗು ಕೊಟ್ಟು ಮುಂದುವರಿಸಿ ಗಜಲಿನ ಕವಿ ಎನಿಸಿಕೊಂಡವನು ಹಾಫಿಸ್. ಸಾದಿಯ ಅನೇಕ ಭಾವನೆಗಳನ್ನು ಹಾಫಿಸನು ಉಪಯೋಗಿಸಿಕೊಂಡಿರುತ್ತಾನೆ. ಇಬ್ಬರೂ ಷೀರಾಸಿನವರು. ಹಾಫಿಸನನ್ನು ಎರಡನೆಯ ಸಾದಿ ಎನ್ನುವುದೂ ಉಂಟು. ಒಂದೇ ಒಂದು ಉದಾಹರಣೆ. 'ಅಳುವೆಯಾ ಬುಲ್ಬುಲನೆ ನಾನಿರುವೆ ನಿನ್ನೊಡನೆ–ಲತೆಯು ಪ್ರೇಮಿಯು ನೀನು ನಾಂ ಲತಾಂಗಿಯ ಪ್ರೇಮಿ' ಇದು ಸಾದಿಯ ಮಾತು. 'ಮಿಡಿವುದಾದೊಡೆ ಎನ್ನ ಹೃದಯದ ರಾಗ ಬುಲ್ಬುಲನೊಂದಿಗೆ- ಬಳುಕು ಚೆಲುವಿನ ಪ್ರೇಮವಿಬ್ಬರಿಗುಂಟು ಅಳುವೆವು ಒಂದಿಗೆ' ಎಂಬುದು ಹಾಫಿಸನ ಹೇಳಿಕೆ. ಹೀಗೆಯೇ ಅವನ ಹಿಂದಿನ ಮತ್ತು ಸಮಕಾಲೀನ ಕವಿಗಳು ಹೇಳಿರುವ ಹಲಕೆಲವು ಮಾತುಗಳನ್ನು ಹಾಫಿಸನು ಉಪಯೋಗಿಸಿಕೊಂಡಿದ್ದಾನೆ. ಆದರೆ ಅವನು ತನ್ನದೇ ಆದ ಹೆಚ್ಚು ಸೊಗಸಿನ ರೀತಿಯಲ್ಲಿ ಹೇಳಿದ್ದಾನೆ ಎನ್ನಬಹುದು.

ಸಾದಿ ಹಾಫಿಸ್ ಇಬ್ಬರೂ ಯೂಸೊಫನು ಕಾನಾನಿನ ಬಾವಿಯಲ್ಲಿ

ಬಿದ್ದ ಪ್ರಸಂಗವನ್ನು ಸಾಮತಿಗಾಗಿ ತೆಗೆದುಕೊಳ್ಳುತ್ತಾರೆ. ಸಾದಿ ಇದರಿಂದ ಒಂದು ನೀತಿಯ ಪಾಠವನ್ನು ಹೆಣೆಯುತ್ತಾನೆ.

'ಕಳೆದುಕೊಂಡಿರೆ ಮಗನ ಯಾಕೊಬನ ಕೇಳಿದರು,
ಮಿಶ್ರ ದೇಶದ ಗಾಳಿಯಿಂ ತಿಳಿದೆ ಎಲೆ ಗುರುವೆ,
ಅವನ ಸೆರಗಿನ ಸುರಭಿ ಓ ಅದೊ ಬರುತಿಹುದು
ಯೂಸೊಫನು ಅಲ್ಲಿಯೇ ಇರುತಿಹನು ನಿಜವೆಂದು.
ಕಾನಾನ ಬಾವಿಯಲಿ ಅಡಗಿದಾ ವೇಳೆಯಲಿ
ಅವನನೇತಕೆ ನೀನು ಹಿಡಿಯಲಾರದೆ ಹೋದೆ?
ಹೇಳಿದನು ಮಿಂಚಿನಂದದಿ ಎನ್ನ ಕಣ್ನೋಟ,
ಜಗವೆಲ್ಲ ಕಾಂಬುದಿದೊ, ಮತ್ತೆಲ್ಲ ಕತ್ತಲಿದೊ.
ಸಗ್ಗಕೇರುವುದೆನ್ನ ಗೆಲುವಿನಾ ಮನವೊಮ್ಮೆ,
ಮುಂದಡಿಯ ಕಾಣದಲೆ ಬಳಲಿ ತಿರುಗುವುದೊಮ್ಮೆ.
ಮನವೊಮ್ಮೆ ಚಲಿಸದಲೆ ನಿಂತಿತಾದೊಡೆ ಕೇಳು
ಸಿಕ್ಕಿದನು ಹಿರಿಯ ದೇವನು ಏಕೆ ಈ ಲೋಕ?'

ಹಾಫಿಸನು ಇದರಿಂದ ಒಂದು ಹಾಡನ್ನು ಕಟ್ಟುತ್ತಾನೆ.

'ಬರುವ ಕಾನಾನಿಂದೆ ಯೂಸೊಫ್ ಮರುಗಬೇಡೆಲೆ ಹೃದಯವೆ
ಬೆಂದ ಬಯಲದು ನಾಳೆಯಹುದುದ್ಯಾನ ಅಳದಿರು
ಹೃದಯವೆ.—

ಹಾಫಿಸನ ಗಜಲುಗಳಲ್ಲಿ ಒಂದು ಕವಿತಾಲಹರಿ ಕಾಣುವುದಂತೂ ಸರಿಯೇ. ಆದರೆ ಈ ಪದ್ಯಗಳಲ್ಲಿ ಮುಕ್ಕಾಲುಪಾಲಿನವಕ್ಕೆಲ್ಲ ಸೂಫಿ ತತ್ವಕ್ಕೆ ಅನುಸಾರವಾದ ಅರ್ಥವನ್ನು ಕಲ್ಪಿಸಬಹುದು. ಆದುದರಿಂದ ಇತರರು ಅವನು ಪ್ರಾಪಂಚಿಕ ಪ್ರೇಮಾಲಾಪಗಳನ್ನು ಕುರಿತು ಬರೆದ ಪದ್ಯಗಳಿಗೆ ಆಮೇಲೆ ಬಂದವರು ಸೂಫಿ ಅರ್ಥವನ್ನು ಕಲ್ಪಿಸಿದುದು ಹಾಗಿರಲಿ ಹಾಫಿಸನು ತಾನೇ ಸೂಫಿ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಗಜಲುಗಳನ್ನು ಬರೆದಿರಬೇಕು ಎಂದು ಕೆಲವು ವಿಮರ್ಶಕರು ಹೇಳುವ ವಾದ ಸಾಧುವಾಗಿ ಕಾಣುತ್ತದೆ. ಸ್ವಲ್ಪಮಟ್ಟಿಗೆ

ಈ ದೃಷ್ಟಿಯಿಂದ ಪದ್ಯಗಳ ಸೊಗಸು ಕೂಡ ಹೆಚ್ಚುತ್ತದೆಯೆಂದು ಹೇಳಬಹುದು.

ಹಾಫಿಸನ ಪದ್ಯಗಳು ಆವನ ಕಾಲದಲ್ಲಿಯೇ ದೂರದೂರದವರೆಗೆ ಹಬ್ಬಿದ್ದವು. ಬಂಗಾಳದ ಒಬ್ಬ ನವಾಬನೂ ಬಹಮನೀ ರಾಜ್ಯದ ಮುಹಮ್ಮದ್ ಶಾಹನೂ ಇವನನ್ನು ತಮ್ಮ ಆಸ್ಥಾನಕ್ಕೆ ಬರಬೇಕೆಂದು ಕರೆದಿದ್ದರಂತೆ. ಇವನು ಷೀರಾಸಿನ ಹತ್ತಿರ ಇರುವ ಒಂದು ಗುಡ್ಡದ ಮೇಲೆ ತಪಸ್ಸು ಮಾಡಿ ಕವಿತಾಶಕ್ತಿಯನ್ನು ಪಡೆದನೆಂದು ಐತಿಹ್ಯವುಂಟು. ಇವನ ಚಿಕ್ಕಪ್ಪ ಒಂದು ಸೂಫಿ ಪದ್ಯವನ್ನು ಪ್ರಾರಂಭಮಾಡಿ ಮುಂದು ವರಿಸಲಾರದೆ ಇಟ್ಟಿದ್ದಾಗ, ಅದನ್ನು ತಾನು ಪೂರಯಿಸಿ ಹಾಫಿಸನು ಮೊದಲು ತನ್ನ ಕವಿತಾಶಕ್ತಿಯನ್ನು ತೋರ್ಪಡಿಸಿದನೆಂತಲೂ, ಚಿಕ್ಕಪ್ಪನು 'ನಿನ್ನ ಕವಿತೆ ಎಲ್ಲಾ ಕಡೆಗೂ ಹಬ್ಬಲಿ, ಆದರೆ ಓದಿದವರಿಗೆ ಹುಚ್ಚು ಹಿಡಿಯಲಿ' ಎಂದು ಶಾಪ— ವರ?— ಕೊಟ್ಟನೆಂತಲೂ ಕತೆಯುಂಟು. ಅವನ ದೇಶದವರು ಹಾಫಿಸನಿಗೆ 'ಲಸಾನ್ ಉಲ್ ಗೈಬ್—ಮಾಯೆಯ ಅಥವಾ ದೈವದ ವಾಣಿ' ಎಂದು ಹೆಸರಿಟ್ಟಿರುತ್ತಾರೆ. ಅವನ ಗ್ರಂಥವನ್ನು ತೆಗೆದು ಶಕುನ ನೋಡುವುದೂ ಉಂಟು. ಈ ವಿಷಯದಲ್ಲಿ ಇ. ಜಿ. ಬ್ರೌನ್ ಅವರು ಹಾಫಿಸನ ವಿಷಯವನ್ನು ಪ್ರಸ್ತಾಪಿಸುತ್ತ 'ಲತೀಫಯೆ ಗಯ್ಯಾಬಿಯು' ಪುಸ್ತಕದಿಂದ ತೆಗೆದು ಕೊಟ್ಟಿರುವ ಒಂದು ಉದಾಹರಣೆ ಸ್ವಾರಸ್ಯವಾಗಿದೆ.

ಫತಹ್ ಆಲಿ ಸುಲ್ತಾನನೆಂಬವನೊಬ್ಬನು ಹಾಫಿಸನ ಸಮಾಧಿಯ ಹತ್ತಿರಕ್ಕೆ ಹೋಗಿ 'ದೀವಾನ್' ಗ್ರಂಥವನ್ನು ತೆಗೆದು ಏನು ಹೇಳುತ್ತ ದೆಂದು ನೋಡಿದನಂತೆ. ಮೊದಲನೆಯ ಸಲ ಈ ಪದ್ಯ ಕಣ್ಣಿಗೆ ಬಿದ್ದಿತು:

ಸರ್ ಮಸ್ತ್ ಬಾ ಕುಬಾಃಯೆ ಸರ್ ಅಫ್ ಷಾಂ ಚೂ ಬಗುಜರೀ
ಯುಕ್ ಬೋಸ ನಸರೆ ಹಾಫಿಸೆ ಪಷ್ಮೀನಪೋಷ್ ಕುನ್.—

(ಕುಡಿದು ಮಧುವನು ಚಿನ್ನದಂಗಿಯ ತೊಟ್ಟು ಈಯೆಡೆ
ನಡೆಯುತ

ಕಂಬಳಿಯು ಹಾಫಿಜ಼ಗೆ ಒಪ್ಪಿಸು ಒಂದು ಮುತ್ತಿನ ಕಾಣಿಕೆ).—
'ಒಂದೇಕೆ ಎರಡು ಮುತ್ತು ಕೊಡುವೆನು' ಎಂದು ಆ ಯುವಕನು ಮನಸ್ಸಿನಲ್ಲಿ ಹೇಳಿಕೊಂಡನು. ಆದರೆ ಕೇಳಿದ ಕಾಣಿಕೆ ಕೊಡದೆ ಹೊರಟುಹೋದನಂತೆ. ಇನ್ನೊಮ್ಮೆ ಆ ಸ್ಥಳಕ್ಕೆ ಬಂದು ಅದೇ 'ದೀವಾನ್' ಗ್ರಂಥವನ್ನು ತೆಗೆದು ನೋಡಲು ಈ ಪದ್ಯ ಕಾಣಿಸಿತು:

**ಗುಫ್ತ ಬೂದೀ ಕೆ ಷವಮ್ ಮುಸ್ತ ಒ ದೋ ಬೋಸ್ತ ಬದೆಹಮ್**
**ವಾಯಿದ ಅಸ್ ಹದ್ ಬಷುದ್ ಬಮಾ ನ ದೋ ದೀದೇಮ್ ನ ಯುಕ್.**—

(ಕುಡಿದು ಸಂತಸದಳೆದು ಮುತ್ತುಗಳೆರಡನೀವೆನು ಎಂದೆ ನೀಂ
ಕಾಲ ಮೀರಿತು ಎರಡ ಕಂಡೆನೆ? ಕಾಣೆ ನಾನೀಗೊಂದನೂ).—
'ಎರಡೇಕೆ ಮೂರು ಮುತ್ತು ಕೊಡುವೆನು' ಎಂದುಕೊಂಡು ಆತ ಮತ್ತೆ ಸುಮ್ಮನೆ ಹೊರಟುಹೋದನಂತೆ. ಮೂರನೆಯ ಸಲ ಗ್ರಂಥ ಹೇಳಿತು:

**ಸೆ ಬೋಸ ಕಸ್‌ದೋ ಲಬತ್ ಕರ್ದಯೀ ಹವಾಲತೆ ಮುನ್**
**ಅಗರ್ ಅದಾ ನ ಕುನೀ ಖರಜ಼ಾರೆ ಮನ್ ಬಾಷೀ** —

(ಮೂರು ಮುತ್ತನು ಎರಡು ತುಟಿಯಿಂದೀವೆನೆನ್ನುತ ಹೇಳಿದೆ
ಇತ್ತ ಭಾಷೆಯು ನಡಸೆಯಾದರೆ ಸಾಲವೆಂದಿಗು ತೀರದು).—
ಇದನ್ನು ಓದಿಕೊಂಡು ಫತಹ್ ಆಲಿಯು ಸಮಾಧಿಯ ಕಲ್ಲಿನ ಮೇಲೆ ಒಂದಲ್ಲ ಹತ್ತು ಮುತ್ತು ಕೊಟ್ಟು ಹಿಂದಿರುಗಿದನಂತೆ.

---

# ಉಮರ್ ಖಯಾಮ್

ನಾ ಕರ್ದ ಗುನಾಃ ದರ್ ಜಹಾಂ ಕೀಸ್ತ್ ಬೆಗೋ
ಆಂ ಕಸ್ ಕೆ ಗುನಾಃ ನ ಕರ್ದ ಚೂಂ ಜೀಸ್ತ್ ಬೆಗೋ
ಮನ್ ಬದ್ ಕುನಮ್ ಒ ತೂ ಬದ್ ಮುಕಾಫಾತ ದೆಹೀ
ಪಸ್ ಫರ್ಕ್ ಮಿಯಾನೆ ಮನ್ ಒ ತೂ ಚೀಸ್ತ್ ಬೆಗೋ

'ಲೋಕದಲ್ಲಿ ಪಾಪ ಮಾಡದವನು ಯಾರು? ಪಾಪ ಮಾಡದೆ ಮನುಷ್ಯ ಬದುಕಿದ ಹೇಗೆ, ಯಾವಾಗ? ನಾನು ತಪ್ಪು ಮಾಡಿದೆ. ನೀನು ನನಗೆ ಕೆಟ್ಟುದನ್ನು ಮಾಡಿದೆ. ನನಗೆ ನಿನಗೆ ಇರುವ ವ್ಯತ್ಯಾಸವೇನು? ಹೇಳು' ಎಂದು ದೇವರನ್ನು ಸಂಬೋಧಿಸಿ ಹಾಡಿದ ಕವಿ ಉಮರ್‌ಖಯಾಮ್. ಸಂಪ್ರದಾಯದ ಹಾದಿಯನ್ನು ಬಿಟ್ಟು ಸ್ವಲ್ಪ ಸರಿದವನು ಎಂದು ಇದರಿಂದ ಭಾಸವಾಗುತ್ತದೆ. ನಾಸ್ತಿಕನೆಂದು ಜನ ತನ್ನನ್ನು ತಿಳಿಯುವರೆಂದು ಅರಿತಿದ್ದನೋ ಏನೊ?

ಗರ್ ಮೈ ನ ಖುರೀ ತಾನ ಮ ಸನ್ ಮಸತಾಂರಾ
ಗರ್ ದಸ್ತ ದೆಹದ್ ತೋಬ ಕುನಮ್ ಯಜದಾಂರಾ
ತೂ ಫಖರ ಬದೀಂ ಕುನೀ ಕೆ ಮನ್ ಮೈ ನ ಖುರಮ್
ಸದ್ ಕಾರ್ ಕುನೀ ಕೆ ಮೈ ಗುಲಾಮಸ್ತ ಆಂರಾ

'ನೀನು ಕಳ್ಳು ಕುಡಿಯುವುದಿಲ್ಲವೋ ಕುಡಿದು ಮತ್ತರಾದವರನ್ನು ಹಳಿಯಬೇಡ. ದೇವರು ನನಗೆ ಕೈಯನ್ನು ದಯಪಾಲಿಸಿದರೆ ಅವನಿಗೆ ಕರಮುಗಿದು ತಪ್ಪು ಒಪ್ಪಿಕೊಳ್ಳುತ್ತೇನೆ. ನಿನಗೆ ನೀನು ಕುಡಿಯುವುದಿಲ್ಲವೆಂಬ ಜಂಭ. ಕಳ್ಳನ್ನು ಮೀರಿಸುವಂತಹ ಕಾರ್ಯಗಳನ್ನು ಎಷ್ಟು ನೂರು ಮಾಡುತ್ತಿರುವೆಯೋ!' ಎಂದು ಹೇಳುತ್ತಾನೆ.

ಉಮರ್ ಖಯಾಮ್ ಫರ್ದೂಸಿಗೂ ಸಾದಿಗೂ ನಡುವಿನ ಕಾಲದವನು ಎಂದು ತಿಳಿದುಬರುತ್ತದೆ. ಈ ಕವಿಗಳ ಹೆಸರನ್ನು ಹೇಳುವಾಗ ಅವರವರು ಅನುಸರಿಸಿದ ಕೆಲವು ಪದ್ಯವಿಶೇಷಗಳನ್ನು ನೆನೆಪಿಗೆ

ತಂದುಕೊಳ್ಳಬಹುದು. ಫರ್ದೂಸಿ ಬರೆದಿರುವುದು ದೊಡ್ಡ ಕಾವ್ಯ. ಕತೆ ಪ್ರವಾಹವಾಗಿ ಹರಿದುಕೊಂಡು ಹೋಗುವುದಕ್ಕೆ ಅನುಕೂಲವಾದ ಮಸ್ನವಿರೂಪದಲ್ಲಿದೆ. ಸಾದಿ ಗಜಲನ್ನು ಪ್ರಾರಂಭಿಸಿದವನೆಂದು ಪ್ರಸಿದ್ಧಿ. ಗಜಲು ಗೀತೆಗೆ ಅನುಕೂಲವಾದ ಪದ್ಯ. ಸಾದಿಗೆ ಮುಂದೆ ಈ ಗಜಲನ್ನು ಯಥೇಚ್ಛವಾಗಿ ಬೆಳಸಿದವನು ಹಾಫಿಸ್. ಹಾಫಿಸ್ ಗಜಲುಗಳನ್ನು ಬರೆದು ಹೆಸರುಗಳಿಸಿದ ಹಾಗೆ ಉಮರ್ ಖಯ್ಯಾಮ್ ರುಬಾಯಿಗಳ ಕವಿ ಎಂದು ಗಣ್ಯನಾಗಿದ್ದಾನೆ. ಹಾಗೆಂದ ಕೂಡಲೆ ಒಬ್ಬ ಪರ್ಸಿಯನ್ ಕವಿ ಹಾಫಿಸನ ಗಜಲಿನ ಸಮೂಹವನ್ನು ಸಮುದ್ರ ಎಂದು ವರ್ಣಿಸಿರುವುದು ನೆನಪಾಗುತ್ತದೆ. ಹಾಫಿಸ್ ಪ್ರೇಮವನ್ನು ಸಮುದ್ರವೆಂದ. ಈ ಕವಿ ಹಾಫಿಸನನ್ನು ಸಮುದ್ರವೆಂದ. ಹಾಫಿಸ್ ಗಜಲಿನ ಸಮುದ್ರ; ಉಮರ್ ರುಬಾಯಿ ಸಮುದ್ರ. ಉಮರ್ ಹಾಗೆ ರುಬಾಯಿಯನ್ನು ಆರಿಸಿಕೊಂಡು ತನ್ನ ಪದ್ಯಗಳನ್ನು ಹೇಳಿದ್ದರಲ್ಲಿ ಒಂದು ಔಚಿತ್ಯ ಕಾಣುತ್ತದೆ. ಅದು ಹಿರಿದಾದ ಭಾವನೆಗಳನ್ನು ಸ್ವಲ್ಪದರಲ್ಲಿ ಅಡಕವಾಗಿ ಹೇಳಲು ಒಪ್ಪಾದ ಮಾರ್ಗ. ಉಮರ್ ದೊಡ್ಡ ಕತೆ ಅಥವಾ ವರ್ಣನೆಗೆ ಕೈಹಾಕಿದ ಕವಿಯಲ್ಲ. ತನಗೆ ಕಂಡ ಸತ್ಯವನ್ನು ನೇರವಾದ ಎರಡು ಮಾತುಗಳಲ್ಲಿ ಹೇಳಿದ ಕವಿ. ಕನ್ನಡದಲ್ಲಿ ಸರ್ವಜ್ಞ ತ್ರಿಪದಿಯನ್ನು ಯಾವ ಕಾರಣದಿಂದ ಬಳಸಿದನೊ ಸುಮಾರು ಅದೇ ಕಾರಣದಿಂದ ಉಮರ್ ಪರ್ಷಿಯನ್ನಿನಲ್ಲಿ ರುಬಾಯಿಯನ್ನು ಬಳಸಿದ ನೆನ್ನಬಹುದು. ಕಿರಿದರಲ್ಲಿ ಹಿರಿದಾದ ಸೊಗಸು, ಅರ್ಥ ಕಂಡರೆ ಅದು ಕವಿಯ ಮೇಲ್ಮೆ ಕವಿತ್ವದ ಒಲ್ಮೆ. ಉಮರ್ ರಸಿಕನಾಗಿ ನುಡಿದಿದ್ದಾನೆ, ಗಂಭೀರವಾಗಿ ಉಪದೇಶಮಾಡಿದ್ದಾನೆ, ಕುಡಿಯೋಣ ಕುಣಿಯೋಣ ಎಂದಿದ್ದಾನೆ, ಸಂಪ್ರದಾಯವನ್ನು ಹಾಸ್ಯಮಾಡಿದ್ದಾನೆ, ಭಕ್ತಿಯನ್ನು ಬೀರಿದ್ದಾನೆ. ಅವನನ್ನು ಸೂಫಿ, ವೇದಾಂತಿಯೆಂದು ಕರೆಯುವುದೆ, ಚಾರ್ವಾಕನೆನ್ನುವುದೆ— ಕವಿಯಲ್ಲಿ ಮಾತಾಡಿ ಕಟ್ಟಿಗೆ ಸಿಕ್ಕದೆ ಹಾರಿಕೊಂಡು ತೇಲಿಕೊಂಡು, ಒಡನೆ ಮನಸ್ಸನ್ನು ಸೆಳೆದುಕೊಂಡು ಹೋಗುತ್ತದೆ ಅವನ ಧಾಟಿ. ಆ ಕರ್ತವ್ಯದ ನೆರವೇರಿಕೆಗೆ ದೊಡ್ಡ ಪದ್ಯದ ಹೊರೆ ಬೇಕಾಗಿಲ್ಲ, ರುಬಾಯಿಯ ಸಣ್ಣ ರೂಪ ಸಾಕು.

ಡಾಕ್ಟರ್ ಫ್ರೆಡರಿಕ್ ರೌಸೆನ್ ಅವರು ಸಂಪಾದಿಸಿರುವ ಉಮರನ ಪುಸ್ತಕದ ಮೇಲೆ '**ರುಬಾಯಿಯಾತೆ ಹಕೀಮ್ ಉಮರ್ ಖಯಾಮ್**' ಎಂದು ಬರೆದಿದೆ. ಪಾರಸಿ ಕವಿಗಳಿಗೆ ಸಂದಿರುವ ಗೌರವಗಳಿಂದ ಅವರನ್ನು ಗುರುತಿಸುವ ಒಂದು ಸಾಧನ ದೊರೆಯುತ್ತದೆ. **ರುದಾಗಿ,** ಇವನು ಪಾರಸಿಯಲ್ಲಿ ಕವಿತ್ವವನ್ನು ಆರಂಭಿಸಿದವನೆಂದು ಅಭಿಪ್ರಾಯ. ಇವನನ್ನು **ಉಸ್ತಾದ್ ರುದಾಗಿ** ಎನ್ನುತ್ತಾರೆ. ಉಸ್ತಾದ್ ಎಂದರೆ ಗುರು. **ಸಾದಿ, ಷೇಕ್ ಸಾದಿ.** ಷೇಕ್, ಪೂಜ್ಯ. **ಖುಸ್ರು, ಅಮೀರ್ ಖುಸ್ರು,** ಅಮೀರ್, ಶ್ರೀಮಂತ. ಹಾಗೆಯೇ **ಹಾಫಿಸ್, ಖಾಜಾ ಹಾಫಿಸ್.** ಖಾಜಾ, ಗಣ್ಯ, ಮುಖ್ಯ. ಉಮರ್ ಖಯ್ಯಾಮನಿಗೆ **ಹಕೀಮ್ ಉಮರ್ ಖಯಾಮನೆಂದು** ಮನ್ನಣೆ. ಹಕೀಮ್ ಎಂದರೆ ವಿಜ್ಞಾನಿ. ಪಂಡಿತ, ವೈದ್ಯ ಎಂದು ಆಗಬಹುದು. ಬಹುಶಃ ಅವನ ಕವಿತ್ವ ಅಷ್ಟು ಹಿರಿದಾಗಿ ಪರಿಣಮಿಸದಿದ್ದರೆ ಉಮರನು ಪಂಡಿತ, ಗಣಿತಜ್ಞ ಎಂಬ ಖ್ಯಾತಿಯೇ ಹೆಚ್ಚಾಗಿರಬಹುದಾಗಿತ್ತು ಎಂದು ಕಾಣುತ್ತದೆ. ಒಟ್ಟಿನಲ್ಲಿ ಅವನು ಹಕೀಮ್ ಎಂದರೆ ವೈದ್ಯ ಎಂಬ ಬಿರುದಿಗೂ ತಕ್ಕವನು.

'ಈ ಲೋಕದ ವ್ಯಥೆ ವಿಷ ಮಧುಪಾನವೆ ಮದ್ದದಕೆ'

ಎಂದು ಇಹಕ್ಕಾಗಿ ಅಳುವವರಿಗೂ, ಪರಕ್ಕಾಗಿ ಅಳುವವರಿಗೂ ಕೂಡ ತನ್ನ ರುಬಾಯಿಗಳ ರೂಪದಲ್ಲಿ ಔಷಧ ಮಾಡಿಕೊಟ್ಟಿದ್ದಾನೆ.

ರುಬಾಯಿ ಎಂದರೆ ನಾಲ್ಕು ಸಾಲಿನ ಪದ್ಯ. ಹೌದೇ? ಇದು ಪರ್ಷಿಯನ್ನಿನ ಎಣಿಕೆಯಲ್ಲಿ 'ದೋ ಬಯತಿ,' ಎರಡು ಸಾಲಿನ ರಚನೆ. ಆದರೆ ಹಾಗೆ ಎಣಿಸುವ ಒಂದು ಸಾಲಿಗೆ ಎರಡು ಕಾಲುಗಳುಂಟು. ಒಟ್ಟು ನಾಲ್ಕು ಕಾಲುಗಳು ಬರುತ್ತವೆ. ಒಂದು, ಎರಡು, ನಾಲ್ಕನೇ ಪಾದಗಳಿಗೆ ಅಂತ್ಯಪ್ರಾಸ; ಅಥವಾ ಹೀಗೆ ಹೇಳಬಹುದು: ಮೊದಲನೆಯ ಸಾಲಿನ ಮೊದಲರ್ಧಕ್ಕೂ, ಎರಡನೆಯ ಅರ್ಧಕ್ಕೂ ಪ್ರಾಸ, ಮತ್ತು ಮೊದಲನೆಯ ಇಡೀ ಸಾಲಿಗೂ ಎರಡನೆಯ ಇಡೀ ಸಾಲಿಗೂ ಪ್ರಾಸ. ಆದರೆ ರುಬಾಯಿಯ ವೈಚಿತ್ರ್ಯ ನನಗೆ ಕಾಣುವುದು ಈ ಪಾದಪ್ರಾಸ

ಗಳಲ್ಲಲ್ಲ, ಅದರ ಗಣ ಮತ್ತು ಓಟಗಳಲ್ಲಿ. ಪರ್ಷಿಯನ್ನಿನಲ್ಲಿ ಅನೇಕ ಗಣಗಳು ನಮ್ಮಲ್ಲಿನ ಭಾಮಿನಿ, ವಾರ್ಧಿಕಗಳ ಧಾಟಿಯಲ್ಲಿರುತ್ತವೆ. ರುಬಾಯಿಯ ಓಟ ಸುಮಾರಾಗಿ ಪರಿವರ್ಧಿನಿಯ ಕಡೆಗೆ ತಿರುಗುತ್ತದೆ. ಇಲ್ಲಿ ಉಮರನ ಕೆಲವು ರುಬಾಯಿಗಳನ್ನು ಕನ್ನಡಿಸಿಕೊಟ್ಟಿದೆ. ಒಪ್ಪು ಮೂಲದ್ದು, ತಪ್ಪು ಭಾಷಾಂತರದ್ದು.

ಕೆಲವು ರುಬಾಯಿಗಳಲ್ಲಿ ಕುಂಬಾರ, ಗಡಿಗೆಗಳ ಚಿತ್ರ ಬರುತ್ತದೆ. ಮನುಷ್ಯರು ಭಗವಂತನೆಂಬ ಕುಂಬಾರ ಮಾಡಿದ ಹೂಜಿಗಳು ಎಂಬ ತತ್ವ ಇರುತ್ತದೆ. ಈ ಅರ್ಥದ ರುಬಾಯಿಗಳನ್ನು ಸೇರಿಸಿ 'ಕೂಸಾ ನಾಮ' (ಹೂಜಿಯ ಪ್ರಶಂಸೆ) ಎಂದು ಕರೆದಿರುವುದುಂಟಷ್ಟೆ? ಹಾಗೆಯೇ ಕೆಲಕೆಲವು ರುಬಾಯಿಗಳನ್ನು ಸೇರಿಸಿ 'ಸಾಕೀನಾಮ,' 'ಫಲಕ್‌ನಾಮ,' 'ಐಸದ್‌ನಾಮ' ಮುಂತಾಗಿ ವಿಂಗಡಿಸಬಹುದು. 'ಸಾಕೀನಾಮ'— ಈ ಗುಂಪಿನ ರುಬಾಯಿಗಳಲ್ಲಿ ಕವಿ 'ಸಾಕಿ' ಎಂದರೆ ಪಾನಪಾತ್ರೆಯನ್ನು ನೀಡುವ ಗೆಳತಿಯನ್ನು ಉದ್ದೇಶಿಸಿ ಅನೇಕ ಮಾತುಗಳನ್ನು ಹೇಳಿರುವುದು ಕಾಣಬರುತ್ತದೆ. 'ಫಲಕ್‌ನಾಮ'— ಈ ಗುಂಪಿನ ರುಬಾಯಿಗಳು ಈ ಜಗದ್ಗೋಳವನ್ನು ಕುರಿತು ಹೇಳಿರುವ ಪದ್ಯಗಳು. ಬದುಕು, ಬದುಕಿನ ರೀತಿ, ಕರ್ಮಚಕ್ರ, ಇವು ಈ ಪದ್ಯಗಳಲ್ಲಿ ವರ್ಣಿಸಿರುವ ಭಾವಗಳು. 'ಐಸದ್ ನಾಮ'— ಭಗವಂತನನ್ನು ಕುರಿತ ಪದ್ಯಗಳು. ಭಗವಂತನ ರಹಸ್ಯ ಭಗವಂತನಿಗೇ ಗೊತ್ತು, ಆತನು ಕರುಣಿಯೇ ಇರಬಹುದು, ಅವನ ವ್ಯಾಪಾರ ನಮಗೆ ವಿಚಿತ್ರವಾಗಿ ಕಾಣಬಹುದು, ಅದನ್ನು ನಾವೇಕೆ ಪ್ರಶ್ನಿಸಬೇಕು, ಈ ಭಾವನೆಗಳು ಆ ಪದ್ಯಗಳಲ್ಲಿರುತ್ತವೆ. ಕಳ್ಳಿನ ಅಂಗಡಿಯನ್ನು ವರ್ಣಿಸಿರುವ ಪದ್ಯಗಳನ್ನು ಸಂಗ್ರಹಿಸಿ ಬಹುಶಃ 'ಮುಗಾನ್‌ನಾಮ' (ಅಂಗಡಿಯ ಹಾಡು) ಎಂದು ಕರೆಯಬಹುದು.

ಕನ್ನಡದಲ್ಲಿ ಹೆಸರಾದ ಸಾಹಿತಿಗಳು— ಮಾನ್ಯರಾದ ಡಿ. ವಿ. ಗುಂಡಪ್ಪನವರು, ಗೋವಿಂದ ಪೈ ಅವರು, ಅ. ನ. ಕೃಷ್ಣರಾಯರು— ಆಗಲೆ ನಮ್ಮ ಜನಕ್ಕೆ ಉಮರನ ಪರಿಚಯ ಮಾಡಿಸಿದ್ದಾರೆ. ಅವನ

ಉಪದೇಶವನ್ನು ತೆಗೆದುಕೊಂಡು ಮೆಲಕು ಹಾಕುವುದಕ್ಕೆ ಅವರ ಕೃತಿಗಳಲ್ಲಿ ಬೇಕಾದಷ್ಟು ಸಾಮಗ್ರಿ ಇದೆ. ಉಮರನನ್ನು ತಿಳಿಯ ಬೇಕೆನ್ನುವವರು ಆ ಕೃತಿಗಳನ್ನು ಅವಶ್ಯಕವಾಗಿ ಓದಬೇಕು. ಇದು ಉಮರನನ್ನು ಕುರಿತ ಒಂದು ಹರಟೆ ಮಾತ್ರ. ಹರಟೆಗೆ ಪ್ರೇರಕವಾದದ್ದು ಮೂಲ ಪರ್ಷಿಯನ್ ರುಬಾಯಿಗಳ ಧಾಟಿಯ ಒಂದು ಸೆಳೆತ.

## ಪದ್ಯಗಳು

**ಬಟ್ಟಲಿನ ಮಂತ್ರ ಎಲ್ಲರೂ ಹೇಳುವ ಮಂತ್ರ**

ವಾಣಿಗಳೊಳು ಶ್ರೇಷ್ಠವು ಕುರಾನು ಎನ್ನುವರು
ಪಠಿಸುವರಿರಲದನಾಗ ಆಗ ಪಠಿಸುವರು ;
ಬಟ್ಟಲಿನಂಚಿನ ಮಂತ್ರವದೊಂದಿಹುದು
ಜನರೆಡೆಬಿಡದದನೆಲ್ಲೆಲ್ಲಿಯು ಪಠಿಸುವರು.

ಬರಲು ವಸಂತವು ಚೆಲುವೆಯುಳಿರೆ ಬಳಿಯಲ್ಲಿ
ಪಾನದ ಪಾತ್ರೆಯ ನೀಡುತೆ ಬನದೆಡೆಯಲ್ಲಿ
ತೆಗಳಲಿ ಜನ ಕಹಿಯೆಂದೆನ್ನುತ ಕುಡಿತವನು
ನಾಯಿಗು ಕಡೆ ನಾ ನೆನೆದರೆ ಸ್ವರ್ಗವ ಮನದಲ್ಲಿ.

ಈ ಲೋಕದ ವ್ಯಥೆ ವಿಷ ಮಧುಪಾನವೆ ಮದ್ದದಕೆ
ಕುಡಿ ಮದ್ದನು ವಿಷವೇರುವ ಭಯವಿರದಿರುವುದಕೆ
ಹಸುರೊಳಗೊಡನಾಡುತೆ ಕುಡಿ ನೀ ಮಧುಪಾನವನು
ನಿನ್ನಯ ಮಣ್ಣಿನ ಹಸುರೇಳುವ ಮುನ್ನಿರಲೆಚ್ಚರಿಕೆ.

ಕಳ್ಕುಡಿಯಲು ಬಾರದು ಷಾಬಾನೊಳಗೆನ್ನುವರು
ರಜ್ಜಬ್ ತಿಂಗಳು ಭಗವಂತಗೆ ಮೀಸಲು ಎನ್ನುವರು.
ಷಾಬಾನು ರಜಬ್ ದೇವ ರಸೂಲರಿಗೆಂದಾಗೆ
ನಮ್ಮದು ರಮ್ಜಾನ್ ಆಗೆಮಗಾರೆದುರು ?

ಕಳ್ಳು ಡಿದರು ನರಕಕ್ಕೆನ್ನುತ ಹೇಳುವರೆನಗೆ
ಇರಬಹುದೇನೋ ನಂಬಿಕೆಯಾಗದು ಎನಗೆ,
ಕುಡಿದರು ಪ್ರೇಮಿಗಳಿಬ್ಬರು ನರಕಕ್ಕಾಗೆ
ನೋಡಾ ಸ್ವರ್ಗವೆ ಬರಿದೋ ಬರಿದೂ ನಾಳೆಯು ಒಳಗೆ.

ಸ್ವರ್ಗದಿ ಹೂರಿಗಳವರೇ ಅವರಿಹರೆನ್ನುವರು
ಹಾಲು ಜೇನು ಮಧುಪಾನಗಳುಂಟೆನ್ನುವರು
ಚೆಲುವನು ಮಧುವನು ಪೂಜಿಸುವರು ನಾವೆನಲು
ಸರಿ, ಅಲ್ಲಿಹುದನೆ ನಾವಿಲ್ಲಿಗೆ ತಂದನುಸರಿಸಿಹರು.

ನಿನ್ನೊಂದಿಗೆ ಗುಟ್ಟೊರೆಯುುವ ಕಳ್ಳಂಗಡಿ ಎನಗಿರಲಿ
ಒಲ್ಲೆ ನವಾಜನು ನೀನಿಲ್ಲಿದ ಕಟ್ಟೆಯಲಿ
ಮೊದಲಿನ ಕಡೆಯೊಳಗಿನ ಹೊಣೆಯೆಲ್ಲವ ಹೊತ್ತಿಹ ದೈವ
ಸುಡುವೆಯು ಸುಡು ಪೊರೆವೆಯು ಪೊರೆ ನಿನ್ನಾಡಳಿತದಲಿ.

ನಿನ್ನಯು ಮೊಗ ಜಮ್ಷೀದನ ಬಟ್ಟಲ ಮೀರಿಸುವುದೆಲೆ ಸಾಕಿ
ಸಾಯಲು ನಿನ್ನಯು ಮಾರ್ಗದಿ ಚಿರಬದುಕಿಗೆ ಮೇಲೆಲೆ ಸಾಕಿ
ಎನ್ನಯ ಜೀವಕೆ ಬೆಳಕಿತ್ತಾ ಮಣ್ಣಿನ ಕಣ ಕೇಳು
ನೂರುಸಾವಿರ ಸೂರ್ಯರ ಮೀರಿಸುವುದೆಲೆ ಸಾಕಿ.

ಬಿಟ್ಟುಬಿಟ್ಟೆನೆಲ್ಲವನೆಂದೆನೆ ಉಳಿಯಿತು ಮಧು ಒಂದು
ಸಂದಣಿಯಿಂದೋಡಬಹುದು ನುಡಿವುದು ಕಳ್ಳು ಬಿಡೆನೆಂದು
ಹುಟ್ಟಿದೆನು ಮುಸಲ್ಮಾನನಾಗಿ ನಾನಿರಬಹುದು
ಸರಿದೋರದೇಕೊ ಕಳ್ಳಂಗಡಿಯನು ಬಿಡುವುದೆನಗಿಂದು.

ಮಧುವನು ಬಿಡು ಎಂಬುದನೇ ಬಿಟ್ಟುಬಿಡುವುದುಚಿತ
ಅದನಾದರು ಚೆಲುವೆ ಸಾಕಿಯು ಕೈಯಲಿ ಕೊಳ್ಳುವುದುಚಿತ
ಕುಡಿತಕಲಂದರತನ ಧರ್ಮ ತಪ್ಪಿದಾ ದಾರಿಯೆ ಎಮಗುಚಿತ
ಏಳು ಲೋಕಕೂ ಮಿಗಿಲೊಂದು ತೊಟ್ಟು ಕಳ್ಳೆಂಬುದೆ ಉಚಿತ.

**ಬಟ್ಟೆಲಿನ ಪೂಜೆಯೇ ಪೂಜೆ**

ಎಷ್ಟೀ ಕಡಲಿಗೆ ಮಣ್ಣನು ತುಂಬುವುದು
ಸಾಕೀ ಮತಮತಗಳ ಗೊಂದಲವೆನ್ನುವುದು
ಆರೆನ್ನುವರೀ ಖಯ್ಯಾಮನಿಗೆ ನರಕವೆ ಗತಿಯೆಂದು
ನರಕವ ಕಂಡವ ಸ್ವರ್ಗದಿ ಬಂದವನಾರಿಂದು?

ಹಳತು ಹೊಸತು ಎರಡೂ ಪಾನಗಳ ಕೊಳ್ಳುವ ನಾನು
ಎರಡು ಕಾಳಿಗಲ್ಲಿ ಲೋಕ ಲೋಕವನೆ ಮಾರುವೆನು,
ಸತ್ತರೆ ಎಲ್ಲಿಗೆ ಹೋಗುವೆ ಎಂದಲ್ಲವೆ ನೀ ಕೇಳಿದುದು
ಕಳ್ಳನಿತ್ತೆ ನಗಾಮೇಲೆಲ್ಲಿಗಾದರೂ ನಡೆ ನೀನು.

**ನಮ್ಮ ಧರ್ಮ ಕರ್ಮ ಭಗವಂತನ ಕೈಯಲ್ಲಿ**

ತಿಳಿದಿದರಿಂದೇನನು ಬಯಸುವುದೆಂಬುದನು
ದೇವನು ನಮ್ಮೀ ಆಕೃತಿಯನು ತಿದ್ದಿದನು.
ತಪ್ಪಿಲ್ಲವು ನೇಮಿಸಿದಲ್ಲದೆ ನಾನೆಸಗಿದುದು
ಮತ್ತಾ ಕಡೆದಿನದಲಿ ಉರಿಯುವುದುಂಟೇನು?

ಮಸೀದಿ ದೀಪವು ಗುಡಿಯಾ ಹೊಗೆ ಯಾವರೆಗೆ
ನರಕದ ವ್ಯಥೆ ಸ್ವರ್ಗದ ಹೊಗಳಿಕೆ ಯಾವರೆಗೆ,
ಹುಟ್ಟಿನ ಮೊದಲೊಳೆ ಲೇಖಣಿಯೊಡೆಯನು ನೋಡು
ಬರೆದಿರಿಸಿಹ ಆಗುವುದೆಲ್ಲದರ ಬರವಣಿಗೆ.

ಮಂದಿರದಲಿ ಮಠಗುಡಿ ಗೋಪುರ ಶಾಲೆಯಲಿ
ನರಕಕೆ ಹೆದರುವ ಸ್ವರ್ಗವ ಹುಡುಕುವರಿಹರೆಲ್ಲೆಲ್ಲಿ,
ದೇವನ ಗುಟ್ಟನು ತಿಳಿದವನವನಿರುತಿಹನೇ
ಈ ಬಿತ್ತನೆ ಬಿತ್ತಿದನಲ್ಲವು ತನ್ನೊಳಗಿನಲಿ.

**ನಾವೆಲ್ಲ ಕುಂಬಾರ ಮಾಡಿದ ಹೂಜಿಗಳು**

ಹೂಜಿಯು ಇದು ಎನ್ನಂದದ ಪ್ರೇಮಿಯೆ ಇರಬಹುದು
ಪ್ರಿಯತಮೆಯಳ ಸಿರಿಗೂದಲ ಸೆರೆ ಇರಬಹುದು.

ಹೂಜಿಯು ಕಂಠದಿ ಕೈಯಿರುವುದು ಕಾಣುವುದೆ
ಗೆಳತಿಯು ಕಂಠವ ಬಳಸಿದ ಕೈಯೇ ಇರಬಹುದು.

ಈ ಕುಂಬಾರರು ಮಣ್ಣನು ಕೈಯಲಿ ಹಿಡಿದಿಹರು
ಎಚ್ಚರ ಬುದ್ಧಿಯು ನೀತಿಯನದರೊಳು ತುಂಬಿಹರು
ಎಷ್ಟನ್ನು ತಲದ ಕುಟ್ಟಿ ತಟ್ಟಿ ತಿದ್ದುತಲಿಹರೋ
ಪಿತೃಗಳದು ಮೃತ್ತಿಕೆ ಎಂಬುದನೇತಕೊ ಮರೆತಿಹರು.

ಪೇಟೆಯೊಳೊಬ್ಬನ ಕುಂಬಾರನ ಕಂಡೆನು ನಿನ್ನೆಯಲಿ
ಮಣ್ಣಿನ ಮುದ್ದೆಯ ತುಳಿಯುತಲಿದ್ದನು ಬಿಡದಲ್ಲಿ.
ಸಮಯಕೆ ಸರಿಯಾಗಿಂತಾಡಿತು ಮಣ್ಣವನಲ್ಲಿ
ನಾನಿರುವಂತೆಯೆ ನೀನೂ ಇದ್ದೇ ಕರುಣಿಸು ನನ್ನಲ್ಲಿ.

## ಲೋಕ ಎಂದಿನಿಂದಲೋ ಭಗವಂತ ನಡೆಸಿದ ಹಾಗೆ ನಡೆಯುತ್ತಿದೆ

ನಿನಗೂ ನನಗೂ ಮುಂದೆಯೆ ಇದ್ದವು ಹಗಲಿರುಳು
ಜಗವೆಂಬೀ ಗೋಳದ ಹೊರಳುಗಳುರುಳುಗಳು
ನಡೆವೆಡೆಯೊಳು ಮೆಲ್ಲನೆ ಅಡಿಯಿಟ್ಟಾಡುವುದು
ಇದ್ದಿರಬಹುದಾಯೆಡೆ ಚೆಲುವೆಯ ಕಣ್ಣುಗಳು.

ಒಳ್ಳಿತು ಕೆಟ್ಟುದು ಮನುಜನ ಹುಟ್ಟಿನೊಳಿಹುದು
ಶೋಕವು ಸಂತಸ ಕರ್ಮದ ಬೆನ್ನೊಳಗಿಹುದು
ಮತಿಯುಳ್ಳೊಡೆ ತಿರುಗುವ ಗೋಳವ ಬಯ್ಬೇಡ
ಸಾವಿರಪಾಲಿಗೆ ನಿನಗಿಂತಲು ಹಂಗಿನೊಳಿಹುದು.

## ನಾವೇನೂ ನಿಜ ಕಂಡವರಲ್ಲ

ನಿಜವೆಂಬುದು ನಮ್ಮೀ ಕೈಯಲಿ ಕಂಡಿಲ್ಲ
ಜೀವಿತವೆಲ್ಲಾ ಬರಿ ಎಣಿಕೆಯೊಳಿರೆ ಫಲವಿಲ್ಲ.
ಹಿಡಿಯುವುದುಚಿತವು ಪಾನದ ಪಾತ್ರೆಯನು
ಮರವೇನೆಚ್ಚರವೇನಾಗಿರಲದೆ ಎಲ್ಲಿ ?

**ಇಂದಿನ ಪ್ರೇಮ, ಇಂದಿನ ಪಾನ, ನಮಗೆ ಕಾಣುವ ಸತ್ಯ**

ಕಾವೇರದ ಹೃದಯಕೆ ಅಯ್ಯೋ ಎನ್ನಿಸದೆ
ಮುಖಕಾಂತಿಗೆ ಬೆಳಗದ ಹೃದಯವು ಇರುತಿಹುದೆ ?
ಪ್ರೇಮವ ಕಾಣದೆ ಕಳೆದಾ ದಿನವುಂಟೇ,
ಅದಕೂ ವ್ಯರ್ಥದ ವೇಳೆಯು ಇರುತಿಹುದೇ ?

ಇದೆ ಮಹಮೂದನ ರಾಜ್ಯವು ಪಾನದ ಸಂದಣಿಯು
ಇದೆ ದಾವೂದನ ಸವಿಗಾನದ ಸಂದಣಿಯು,
ಬರದುದ ಹೋದುದ ಗುಣಿಸುತ ಕೊರಗಿರುವೆ
ನಲವಿಂದಿರಿಸಲಿ ನಿನ್ನನು ಇಂದಿನ ಸಂದಣಿಯೂ.

ಪ್ರೇಮದ ಕುರುಹೇ ಕಾಣದೆ ಹೃದಯದಲಿ
ಏತಕೆ ಧರ್ಮದ ಛಾಯೆಯು ಯಾವುದೆ ಇರಲಿ ?
ಪ್ರೇಮದ ಹಾಳೆಯೊಳಾವನ ಹೆಸರಿರುತಿಹುದೋ
ಇರನವನೆಂದಿಗು ನರಕದ ಧರ್ಮದ ಹಂಗಿನಲಿ.

ಕಳೆವುದು ವಯಸೆನ್ನಲು ಸಿಹಿಯೇನದರಾ ಕಹಿಯೇನು,
ಯಾತ್ರೆಯೆ ಮುಗಿಯಲು ಬಲಖು ಬಗದಾದುಗಳೇನು ?
ಕುಡಿಯಲು ಬಲ್ಲೆವೆ ಈದಿನ ಕುಡಿಯುವುದೊಳ್ಳೆಯದು
ತಿಂಗಳು ಬೆಳಗುವುದೆಷ್ಟೋ ಬಾರಿ ಇರುವೆವೆ ನಾನ್ನೀನು ?

**ಚರ್ಚೆ ಏತಕ್ಕೊ,**
**ಕರುಣಿಸುವುದು ಬಿಡುವುದು ಭಗವಂತನಿಗೆ ಸೇರಿದ್ದು**

ಶುದ್ಧತೆಯಿಂದಲೆ ಬಂದೆವು ಕೊಳಕಾದೆವು ಇಲ್ಲಿ
ದುಃಖಿಗಳಾದೆವು ಸುಖದೆಡೆಯಿಂ ಬಂದಿಲ್ಲಿ.
ಕಣ್ ನೀರಾಯಿತು ಎದ್ದಿತು ಜ್ವಾಲೆಯು ಮನದಲ್ಲಿ
ಗಾಳಿಗೆ ಒಡ್ಡುತಲಾಯುವ ಇಳಿದೆವು ಮಣ್ಣಲ್ಲಿ.

ಕುದಿದು ಕುದಿದು ಸುಮ್ಮನೆ ಸುಟ್ಟುಕೊಳ್ಳುವ ಪ್ರಾಣಿ
ನರಕದ ಬೆಂಕಿಗೆ ಆಹುತಿಯಾಗಿಹ ಎಲೆ ಪ್ರಾಣಿ

ಉಮರಗೆ ಕರುಣಿಸಲು ಎನ್ನುತೆಷ್ಟು ಹೇಳುತಲಿರುವೆ
ದೇವಗೆ ಕರುಣೆಯ ಬೋಧಿಸೆ ನೀನಾರೆಲೆ ಪ್ರಾಣಿ.

## ಪಾನದ ಉಪಯೋಗ

ಹುಚ್ಚಾಗಲು ಕುಡಿಯುವ ಹವ್ಯಾಸವು ಎನಗಿಲ್ಲ
ಕಟ್ಟಳೆ ಧರ್ಮವ ಮೀರಲು ಕುಡಿಯುವ ನಾನಲ್ಲ.
ಒಂದು ಗಳಿಗೆ ನಾ ನನ್ನನು ಮರೆಯಲು ಕುಡಿಯುವೆನು
ಕುಡಿಯಲು ಇಷ್ಟೇ ಕಾರಣ ಬೇರೊಂದಿಲ್ಲ.
ಕುಡಿದರೆ ಕಳ್ಳನು ಕುಡಿ ಮತಿವಂತರ ಸಂಗದಲಿ
ಕೆಂಪರಳಿದ ನಗೆಮೊಗದೊಡತಿಯ ಸ್ನೇಹದಲಿ.

ಕುಡಿದು ಕುಡಿದು ಆಲುತ ಬಯಲಿಗೆ ಬೀಳದಿರು
ಆಗ ಆಗ ಸವಿಯುತ ಮಿತಿಪ್ಪಾನವನಿರು ಮರೆಯಲ್ಲಿ.
ಕಳ್ಳಿನ ಮಹಿಮೆಯು ಬಂಧನ ಬಿಡಿಸಿ ಸ್ವತಂತ್ರತೆ ನೀಡುವುದು
ಕಳ್ಳನು ಕುಡಿಯಲು ಠೀವಿಯು ಹೆಮ್ಮೆಯು ತಲೆಬಾಗುವುದು
ಬಟ್ಟಲನೆತ್ತುತಲಿಬ್ಲಿಸ್ ಕುಡಿವನೆ ಔಷಧಿ ಪಾನವನು
ಉಂಟವನಾದಮನೆದುರೊಳಗಿಭ್ರಾಸಿರ ದಂಡವ ಗೈಯುವುದು.

## ಸೋಗು ಬೇಡ

ಹೂವಿಲ್ಲವೆ ಪಾಲಿಗೆ ಮುಳ್ಳೇ ಸಾಕೆಮಗೆ
ಬೆಳಕೆಂಬುದು ಬಾರದೆ ಕಾವೇ ಸಾಕೆಮಗೆ,
ಹಾಸು ಹೊದಿಕೆ ಮಂದಿರದೀ ಕುರುಹುಗಳಿರದಿರಲೇನು
ಶಂಖೂ ಜಾಗಟೆ ಜನಿವಾರಗಳೇ ಇರಲೆಮಗೆ.
ಕುಡಿವುದು ಕುಡಿದೊಳಿತೆಂಬರ ಸಂಗದೊಳಾಡುವುದು
ಬೇಡ ಬೇಡ ತ್ಯಾಗಿಗಳೆಂಬರ ಸೋಗಿನ ವಸ್ತ್ರವ ಧರಿಸುವುದು
ಕಳ್ಕುಡಿದವರೆಲ್ಲರು ನರಕಕೆ ಹೋಗಿಹರೆನ್ನುವೆಯ
ಅವನಿಗೂ ಬೇಡ ಕೇಳು ಸ್ವರ್ಗದಾ ದರ್ಶನವೆನ್ನುವುದು.
ಕಳ್ಳನು ಪೂಜಿಸುವನು ನಾನೆನ್ನುವರು ಅಹುದಹುದು
ಕಳ್ಳ ಕುಡಿದು ಮತ್ತೇರಿದವ ನಾನೆನ್ನುವರಹುದಹುದು.

ಹೊರಗೆಂತಿಹೆನೆನ್ನುತ ಎಷ್ಟೆನ್ನನು ನೋಡುವುದು
ಒಳಗೂ ಹೊರಗೂ ಎಂತಿರುವೆನೊ ಅಂತಿಹೆ ನಕಲುದು.

ಕೇಳಿಲೆ ಬೋಧಕ ನಿನಗಿಂತಲು ನಾವೇ ಮೇಲು
ಕುಡಿದಿದ್ದರು ಎಚ್ಚರದಲಿ ನಾವೇ ಮೇಲು
ನೀ ಕುಡಿವುದು ಮಂದಿಯ ರಕ್ತ ಎಮ್ಮದು ಹಣ್ಣಿನದು
ಕುಡಿಯುವರೆಂದರಾರು ನ್ಯಾಯವ ನೀನೇ ಹೇಳು.

ತಬಲಾ ತಂಬೂರಿ ನಾದಕೆ ಕುಣಿಯುವ ಜಾ ಏಳು
ಗಾಳಿಗೆ ಹೋಗಲಿ ಹೆಸರು ಕಳ್ಳುಕುಡಿಯುವ ಜಾ ಏಳು
ಒಟ್ಟಿಲ ಪಾನಕೆ ಪ್ರಾರ್ಥನೆ ಹಾಸನು ಮಾರುವ ಜಾ ಏಳು
ಸೋಗಿನ ತ್ಯಾಗವ ಕಲ್ಲಮೇಲೆ ಕಟ್ಟುವ ಜಾ ಏಳು.

ಉಮರನು ಕೇಳುವ ಕಳ್ಳು ಹುಳಿಹೆಂಡವೋ, ಮಿತವಾದ ರುಚಿಯುಳ್ಳ ದ್ರಾಕ್ಷಾರಸವೊ, ಭಗವನ್ನಾಮಾಮೃತವೊ ಅವರವರ ಊಹೆಗೆ ಬಿಡೋಣ. ಅವನ ಇಡೀ ಗ್ರಂಥದ ಶ್ರುತಿಯಿಂದ ವೇದಾಂತದ ಒಂದು ಧ್ವನಿ ಕೇಳಿಸಿದರೆ ತಪ್ಪೇನು? ಹೂವೆಂದರೆ ಹೂವು, ಚೆಲುವೆ ಯೆಂದರೆ ಚೆಲುವೆ ಎಂಬುದಾಗಿ ಒಂದು ಅಮೋಘವಾದ ಲೌಕಿಕ ಚಿತ್ರ ಮಾತ್ರ ಪಾಶ್ಚಾತ್ಯದೃಷ್ಟಿಗೆ ಅವನ ರಚನೆಯಲ್ಲಿ ಕಂಡುಬಂದರೆ ಕುಂದೇನು? 'ದರ್ ರಾಹ್ ಚುನಾ ರೌ ಕೆ ಸಲಾಮತ್ ನ ಕುನಂದ್— ದರ್ ಮುಸಜಿದ್ ಅಗರ್ ರವೀ ಚುನಾ ರೌ ಕೆ ಪೀಷತ್ ನ ಹಾಹಂದ್ ಒ ಇಮಾಮತ್ ನ ಕುನಂದ್' (ಹಾದಿಯಲ್ಲಿ ಹೋಗುವಾಗ ಇತರರು ನಿನಗೆ ಮರ್ಯಾದೆಯನ್ನು ತೋರಿಸುವ ಹಂಬಲಿಲ್ಲದಂತೆ ಕಂಡು ಕಾಣದ ಹಾಗೆ ನಡೆದು ಹೋಗು— ಮಸೀದೆಗೆ ಹೋದರೆ ಇತರರು ನಿನ್ನನ್ನು ಮುಂದಕ್ಕೆ ಕರೆದು ಪ್ರಾರ್ಥನೆಯ ಕಟ್ಟೆಯಲ್ಲಿ ನಿಲ್ಲಿಸುವಂತೆ ಗದ್ದಲ ಮಾಡದ ಹಾಗೆ ಮೆಲ್ಲಗೆ ಹೋಗಿ ಬಂದುಬಿಡು) ಎಂದು ಸೌಜನ್ಯವನ್ನು ಬೋಧಿಸಿದವನು ಉಮರ್ ಖಯಾಮ್. ಅವನ ಕವಿತೆ ಮೀಟಿದ ತಂತಿಯ ಏರು ತಗ್ಗಿನ ದನಿಗಳೆರಡನ್ನೂ ಈ ಸೌಜನ್ಯದ ಕಿವಿಯಿಂದ ಕೇಳುವುದು ಉಚಿತ.

---

# ಇದೇ ಲೇಖಕರ ಇತರ ಕೃತಿಗಳು

೧. ಯಂಗಾದಿ. ಪದ್ಯಗಳ ಸಂಗ್ರಹ
೨. **ಗುಲಿಸ್ತಾನ್ ಕತೆಗಳು.** ಸಾದಿ ಕವಿಯ ಗುಲಿಸ್ತಾನ್ ಗ್ರಂಥದಿಂದ ಕೆಲವು ಆಯ್ಕೆಗಳು
೩. The piece of wood and other poems ಇಂಗ್ಲಿಷ್ ಪದ್ಯಗಳು

## ಬರಲಿರುವವು :

೪. **ಹಾಫಿಸನ ಹಾಡುಗಳು.** ಪ್ರಸಿದ್ಧ ಪಾರಸೀ ಕವಿಯಾದ ಹಾಫಿಸನ ನೂರಕ್ಕು ಹೆಚ್ಚು ಗಜಲುಗಳ ಭಾಷಾಂತರ
೫. **ಸಾದಿ ಕವಿಯ ಗುಲಿಸ್ತಾನ್.** ಸಂಪೂರ್ಣ ಗ್ರಂಥ
೬. **ಸಾದಿ ಕವಿಯ ಬೋಸ್ತಾನ್.** ಸಂಪೂರ್ಣ ಪದ್ಯಗ್ರಂಥ
೭. **ಸಾದಿಯ ಹಿತವಚನಗಳು.** 'ಕರೀಮಾ'ದ ಭಾಷಾಂತರ
೮. **ಫಿರ್ದೂಸಿ ಮಹಾಕವಿಯ ಷಾಹನಾಮ.** ಮೊದಲನೇ ಭಾಗ—ಗದ್ಯಕತೆ
೯. **'ಪಾರಸೀ ಸಾಹಿತ್ಯದಲ್ಲಿ ಹೂವು ಹೊಂಬಣ್ಣ'** ಮುಂತಾದ ಲೇಖನಗಳು
೧೦. **ಕವಿತೆಗಳು.**

---